# ಅಂಬಿಕಾತನಯು ಹಾಡಿದನೆಂದರೆ ಹೂವುಗಳರಳುವವು

(ಹಿಂದುಸ್ತಾನಿ ಶಾಸ್ತ್ರೀಯ ಸಂಗೀತ ಸಂಯೋಜನೆಯೊಂದಿಗೆ)



ಸಂಪಾದಕರು:

ಡಾ|| ವಾಮನ ಬೇಂದ್ರೆ




ವರಕವಿ ದ.ರಾ.ಬೇಂದ್ರೆ ಇವರಿಗೆ ಸಂದ ಪ್ರಶಸ್ತಿಗಳ ಹಾಗೂ ಅವರು ಬಳಸಿದ ವಸ್ತುಗಳ ದರ್ಶನ: ಕವಿನಿವಾಸ "ಶ್ರೀಮಾತಾ", ಧಾರವಾಡ.



# ಅಂಬಿಕಾತನಯ ಹಾಡಿದನೆಂದರೆ ಹೂವುಗಳರಳುವವು

(ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತ ಸ್ವರ ಸಂಯೋಜನೆ ಒಳಗೊಂಡು)



ವರಕವಿ ಡಾ॥ ದ. ರಾ. ಬೇಂದ್ರೆ ವಿರಚಿತ

---

# ಅಂಬಿಕಾತನಯ
# ಹಾಡಿದನೆಂದರೆ ಹೂವುಗಳರಳುವವು

(ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತ ಸ್ವರ ಸಂಯೋಜನೆ ಒಳಗೊಂಡು)

ಸಂಪಾದಕರು :

**ಡಾ॥ ವಾಮನ ಬೇಂದ್ರೆ**

ಸಂಗೀತ ಸಂಯೋಜಕರು :

**ಶ್ರೀ ಕೃಷ್ಣಾಜಿ ಕುರ್ತಕೋಟಿ**

---

ಪ್ರಕಾಶಕರು :

ಡಾ॥ ಕೆ. ಎಸ್. ಶರ್ಮಾ, ನಿರ್ದೇಶಕರು,

ವರಕವಿ ಡಾ॥ ದ. ರಾ. ಬೇಂದ್ರೆ ಸಂಶೋಧನ ಸಂಸ್ಥೆ

ಹಾಗೂ ಬೇಂದ್ರೆ ಸಂಗೀತ ಅಕಾಡೆಮಿ, ಹುಬ್ಬಳ್ಳಿ

★ AMBIKATANAYA HADIDANENDARE HUVUGALARALUVAVU
(A Collection of Poems by DR. D. R. BENDRE
comprising of Musical Notations in Hindustani Classical Style)

★ Edited by : Dr. Vaman Bendre.

★ Music Compositions by : Sri Krishnaji Kurtkoti.

★ Art by : Sri. Suresh Kulkarni.

★ D. T. P. :Sri Iranna B. Noolvi - D.T.P. Section - Dr. K. S. Sharma I. T. C., Hubli

★ Cover Design by : Sri.Ravindra Shirolkar, Dharwad.

★ Published by : Dr. K. S. Sharma,
Director, Poet Laureate Dr.D.R.Bendre Research Institute and Bendre Sangeeth Academy,
"Vishwashrama Chetana", Gokul Road, Hubli- 580 030. (Phone 0836-2330466)

★ First Edition : 1000 copies

★ Published on : 21-2-2008
(On the occasion of the 112th Birth Anniversary of Dr. D. R. Bendre &
8th Anniversary of Bendre Research Institute : 21-2-2008-Gurupratipada)

★ Price : Rs.70-00



★ ಅಂಬಿಕಾತನಯ ಹಾಡಿದನೆಂದರೆ ಹೂವುಗಳರಳುವವು
ವರಕವಿ ಡಾ॥ದ.ರಾ.ಬೇಂದ್ರೆ ರಚನೆ : ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತಕ್ಕೆ ಸ್ವರ ಸಂಯೋಜನೆ ಒಳಗೊಂಡ ಕವನಗಳ ಸಂಕಲನ

★ ಸಂಪಾದಕರು : ಡಾ॥ ವಾಮನ ಬೇಂದ್ರೆ.

★ ಸಂಗೀತ ಸಂಯೋಜನೆ : ಶ್ರೀ ಕೃಷ್ಣಾಜಿ ಕುರ್ತಕೋಟಿ.

★ ಕಲೆ : ಶ್ರೀ. ಸುರೇಶ ಕುಲಕರ್ಣಿ.

★ ಪುಟ ವಿನ್ಯಾಸ : ಶ್ರೀ ಈರಣ್ಣ ಬ. ನೂಲ್ವಿ-ಡಿ.ಟಿ.ಪಿ. ವಿಭಾಗ, ಡಾ. ಕೆ. ಎಸ್. ಶರ್ಮಾ ಸಮೂಹ ಸಂಸ್ಥೆಗಳು, ಹುಬ್ಬಳ್ಳಿ

★ ರಕ್ಷಾಕವಚ : ಶ್ರೀ ರವೀಂದ್ರ ಶಿರೋಳಕರ, ಧಾರವಾಡ

★ ಮುದ್ರಕರು : ಶರ್ಮಾ ಮುದ್ರಕರು ಹಾಗೂ ಪ್ರಕಾಶಕರು, ೪, ಪತ್ರಕರ್ತರ ಕಾಲೋನಿ, ಹುಬ್ಬಳ್ಳಿ-೩೨

★ ಪ್ರಕಾಶಕರು :
ಡಾ॥ ಕೆ. ಎಸ್. ಶರ್ಮಾ,
ನಿರ್ದೇಶಕರು, ವರಕವಿ ಡಾ॥ ದ. ರಾ. ಬೇಂದ್ರೆ ಸಂಶೋಧನ ಸಂಸ್ಥೆ ಹಾಗೂ ಬೇಂದ್ರೆ ಸಂಗೀತ ಅಕಾಡೆಮಿ,
'ವಿಶ್ವ ಶ್ರಮಚೇತನ', ಗೋಕುಲ ರಸ್ತೆ, ಬಸವೇಶ್ವರ ನಗರ, ಹುಬ್ಬಳ್ಳಿ-೫೮೦ ೦೩೦

★ ಪುಸ್ತಕಗಳಿಗಾಗಿ ಬರೆಯಿರಿ :
ಶ್ರೀಮಾತಾ ಪ್ರಕಾಶನ,
ವಿಶ್ವಶ್ರಮ ಚೇತನ, ಗೋಕುಲ ರಸ್ತೆ ಹುಬ್ಬಳ್ಳಿ - 580 030
ರವೀಂದ್ರ ಪುಸ್ತಕಾಲಯ,
ಚಾಮರಾಜಪೇಟೆ, ಸಾಗರ - 577 421, ಶಿವಮೊಗ್ಗ ಜಿಲ್ಲೆ, ದೂರವಾಣಿ : 08186-228616 (ಕ).

★ ಮೊದಲ ಮುದ್ರಣ : ೧೦೦೦ ಪ್ರತಿಗಳು

★ ಮೊದಲ ಪ್ರಕಟಣೆ : (ಡಾ॥ ದ. ರಾ. ಬೇಂದ್ರೆಯವರ ೧೧೨ನೇ ವಾರ್ಷಿಕ ಜನ್ಮದಿನ ಹಾಗೂ
ಬೇಂದ್ರೆ ಸಂಶೋಧನ ಸಂಸ್ಥೆಯ ೮ನೇ ವಾರ್ಷಿಕೋತ್ಸವದ ಪ್ರಯುಕ್ತ : ೨೧-೨-೨೦೦೮ - ಗುರುಪ್ರತಿಪದಾ)



★ ಬೆಲೆ : ರೂ.೭೦-೦೦



# ಅರ್ಪಣೆ

ಹೂ! ಯಾಹೂ? ಈ
ಹೂ!
ಈ ತನುವು, ಈ ಮನವು,
ಹೂ-ಮನವು, ಹೂ-ತನವು
ಈತನವು ಆತನವು.

ಈ-ತನದ ಯಾತವನು
ಯಾತನೆಯ ಹೂತನವನು
ಹೂಮನದ ಈ ಮನುವು
'ಪೂ'ಗೆ 'ಹೂ' ಎಂದನವನು
ಮಾತನೆ ನೂತನವನು
ಹೂತನವ ಗೀತದಲಿ
ಆತ ಪಿತ ಈತನಕೆ.

ಹೂ ಆಶೆ ಬೀಜದಾಶೆ
ಬೀಜವನು ಬಿತ್ತುವಾಶೆ
ಹೂವಾಗಿ ಅರಳುವಾಶೆ
ಬೀಜ ಬಿಡುವ ಆಶೆ.

ಹಣ್ಣು-ಹೂ ತಾನೆ ಅರಳಿ
ಹೂ ಮರಳಿ ಮರಳಿ ಅರಳಿ
ಹೂ-ಹಣ್ಣಾಗಿ
ಹಣ್ಣು ಹಣ್ಣಾಗಿ
ತಾನಾಗಿ ಮಾಗಿ.

ಔದುಂಬರನಾಗಿ
ಅಂಬರ "ದತ್ತ"ನಾಗಿ
ಸಾಗಿದ "ಹೂ"ಮಾಗಿ.

ಹೂ ಆಶೆ ಬೀಜದಾಶೆ
ಬೀಜ ಬಿಡುವ ಆಶೆ
ಅಂಬಿಕಾತನಯನಾಶೆ.

ವಿಶ್ವಕವಿಯ ದರ್ಶನದ "ಹೂ" ಕವನಗಳ ಸುಗಂಧದ ಮೂಲಕ ಅರಳಿದ ದತ್ತಕಂಠಗಳಿಗೆ ನಮ್ಮ ಆದರದ ನಮನ. "ಬೇಂದ್ರೆ ಸಂಗೀತ"ದಲ್ಲಿ ಧ್ರುವ ನಾದದೊಂದಿಗೆ, ಪದಪುಂಜಗಳೇ ಧ್ರುವ! ಈ ಧ್ರುವ ಶಾಶ್ವತ ಸತ್ಯ.

ವಾಮನ
(ಸಂಪಾದಕ)

ಕುವಲಯಶ್ಯಾಮ
(ಪ್ರಕಾಶಕ)

# ಪರಿವಿಡಿ

## ಬೇಂದ್ರೆ ಹಾಡಿದನೆಂದರೆ ಹೂವುಗಳರಳುವವು - ಭೂಮಿಕೆ

ಮಹಾಕವಿ ಕುಮಾರವ್ಯಾಸನು ಶ್ರೀಕೃಷ್ಣಕಥೆಯನ್ನು ಹಾಡಿ ದ್ವಾಪರಯುಗವನ್ನು ಸ್ವಾಗತಿಸಿದರೆ; ವರಕವಿ ಅಂಬಿಕಾತನಯದತ್ತನು ಭೂಲೋಕದ ಹೂಮನಸಗಳನ್ನು ಅರಳಿಸಿ ಕೃತಯುಗವನ್ನು ಸ್ವಾಗತಿಸುತ್ತಾನೆ. ಒಳ್ಳೆಯ ಕ್ರಿಯೆಗಳ ವೈಭವ ಕೃತಯುಗದ ಲಕ್ಷಣ. ಸುಗಂಧದ ಉಸಿರಾಟ ಮಾಡುವುದರಿಂದ ಸತ್ ಕಾರ್ಯಗಳ ಪ್ರೇರಣೆ ಲಭಿಸುತ್ತದೆ. ಹೂವುಗಳ ಸುಗಂಧಕ್ಕೆ ಆ ಮಹಾಶಕ್ತಿ ಇದೆ. ಹೂವುಗಳರಳದೇ ಕಂಪಿನ ಕರೆ ಅಸಾಧ್ಯ. ಅರಳಿಸುವವ ಕವಿ ಎಂಬ ಬ್ರಹ್ಮ! ಸಕಲರ ಜನನಕ್ಕೆ- ಸೃಷ್ಟಿಗೆ ಕಾರಣನಾದ ಬ್ರಹ್ಮ ಕೂಡ - ಕಮಲಜ! ಹೀಗಿದೆ ಹೂವಿನ ಮಹಾತ್ಮ್ಯ.

ದೇವರೇ ಇರಲಿ, ದಾನವರೇ ಇರಲಿ ಹಾಗೂ ಮನುಷ್ಯರೇ ಇರಲಿ ; ಪಾದದಿಂದ ಶಿರಸ್ಸಿನವರೆಗೆ, ಬೆನ್ನ ಹುರಿಯ ಸ್ಥಾನಗಳಲ್ಲಿ ಷಟ್‌ಚಕ್ರ- ಮೂಲಾಧಾರ, ಸ್ವಾಧಿಷ್ಠಾನ, ಮಣಿಪುರ, ಅನಾಹತ, ವಿಶುದ್ಧ, ಆಜ್ಞಾ ಎಂಬ ಕಮಲಗಳು ಸ್ಥಾನಪಡೆದಿವೆ. ಇವು ಜಾಗೃತವಾದಾಗ- ಸಹಸ್ರದಳಗಳುಳ್ಳ ಕಮಲ ಅರಳುತ್ತದೆ. ಅಕ್ಷರ ಮತ್ತು ಸಂಖ್ಯೆಗಳ ನಿಕಟವಾದ ಸಂಬಂಧ ಈ ಕಮಲಗಳಿಗೆ ಇದೆ. ಆದುದರಿಂದ ಅಂಬಿಕಾತನಯದತ್ತರು-

“ ಹೂವ ಹಡಲಿಗೆಯನು ಹೊತ್ತ
ಭೂಮಿತಾಯಿ ಜೋಗಿತಿ
ಮೈತುಂಬಿ ಕುಣಿಯುತಿಹಳ-
ನಂತಕಾಲವೀಗತಿ”

ಎಂಬುದಾಗಿ ' ಶ್ರಾವಣದ ವೈಭವ' ದಲ್ಲಿ ವರ್ಣಿಸಿದ್ದಾರೆ.

ಮೊದಲ ಕವನ ಸಂಕಲನ 'ಗರಿ' ಯಿಂದ 'ಪ್ರತಿಬಿಂಬಗಳು' ಎಂಬ ಕೊನೆಯ ಸಂಗ್ರಹದವರೆಗೆ, ಅವರು ಕಂಡ ಹೂವಿನ ದರ್ಶನ ಈ ಸಂಕಲನದಲ್ಲಿದೆ. ಇಲ್ಲಿಯ ಹದಿನಾರು ಕವನಗಳನ್ನು ಆರು ವಿಭಾಗಗಳಲ್ಲಿ ವಿಭಜಿಸಬಹುದು. ಅದು ಹೀಗೆ-

೧. ಹೂ, ಹೂವೇ, ಹೂ-ಊಂಹೂ

೨. ಪಾತರಗಿತ್ತಿಪಕ್ಕ, ಶ್ರಾವಣ ವೈಭವ, ಮುಗಿಲ ಮಲ್ಲಿಗೆ

೩. ವನಸುಮ, ಹಸಿರಲ್ಲಿವೆ ಕೆಸರಲ್ಲಿವೆ

೪. ಪಾರಿಜಾತ, ಬಿಳಿಕಣಗಿಲ, ದಿವ್ಯಕರುಣೆಯ ಪುಷ್ಪ

೫. ಮಲ್ಲಿಗೆ, ಗಮಗಮಾ ಗಮಾಡಸತಾವ ಮಲ್ಲಿಗಿ

೬. ಹುಂಜ ಹೂ, ಜೇಡನ ಹೂ, ಸುಖದುಃಖ.

ಬ್ರಹ್ಮನು ಸಮಾಧಿಯಲಿ, ಒಲವಿನ ನಲಿವಿನಲಿ, ಚೆಲುವಿನಾ ಕಾಣಿಕೆಗೆ 'ಹೂ' ಎಂದು ಎಂದ ; ಹಾಗೂ ಅವನು 'ಪುಃ' ಎಂಬ ಬಿಟ್ಟುಸಿರೆ ತಾನೆ 'ಹೂ' ಎಂಬ ಹೆಸರಾಯ್ತು. ಇಂಥ ಈ ಹಗುರಾದ, ಸವಿ ಹೆಸರುಳ್ಳ ಹೂ-ಎಲರಲೆಯ ಪರಿಮಳಿಸಿ, ನಾತಗೀತವನಳಿಸಿ, ವ್ಯೈಮನದಿ ನಂದನವನವನ್ನರಳಿಸಿತು. ಈ ' ಹೂವೆ' ಕುಹೂ ಕುಹೂ ಕೂಹೂ ಎಂದು ಕೂಗುತ್ತ ಮಾವಿನ ಹೂವಾಯಿತು = ಸುಖದ ಸಂಕೇತ ಹಾಗೂ ಬೇವಿನ ಹೂವಾಯಿತು=ದುಃಖದ ಸಂಕೇತ. ಒಣಗಿದ ಬಕುಲದ ಹೂವಿನ ಸುವಾಸನೆಗೆ ಊಂಹೂ, ಊಂಹೂ, ಊಂಹೂ ಎನ್ನಲಾದೀತೆ ? ಹೇಸಿಗೆಯು ಹೂವಿನ ರಂಗವಲ್ಲಿ ಹಾಗೂ ಹೊಲದ ಹೂಸೆಲದ ಹಾಗೆ ಹಬ್ಬಿರುತ್ತದೆ. 'ವನಸುವ' ವಿರಲಿ; 'ಹಸಿರಲ್ಲಿ ಕೆಸರಲ್ಲಿ ಅರಳಿದ ಹೂ' ಇರಲಿ; ಕಾಮಭಾವ ತೊಳೆದು, ಎದೆಯ ಹದವನ್ನು ಹಾಗೂ ಮನದ ಹದವನ್ನು ಬೆಳೆಸಿದ ಮಾಟವಾದ 'ಪಾರಿಜಾತ' ವಿರಲಿ; ನೇಹ ನೂತ ಮಮತೆ ನೂತು, ಪ್ರಸಾದ ತರುವ ಅರ್ಪಣಭಾವದ 'ಮುಗಿಲ ಮಲ್ಲಿಗೆ' ಇರಲಿ; ಕೋಕಿಲ ಕಂಠದ ಪಂಚಮು ವರ್ಣದ, ಮಾನಸಿಕ ಪರಿಪೂರ್ಣತೆಯ ಸಂಕೇತವಾದ 'ಬಿಳಿಕಣಗಿಲ' ವಿರಲಿ ; ಗಂಧಬಾಂಧವನಾದ ಸ್ವಚ್ಛಂದ ಮಾರುತನು ಪ್ರತಿಯೊಂದು

ಹೂವಿನ ಸುಗಂಧವನ್ನು ಉಸಿರಾಡಿಸಲು ಹಚ್ಚಿ, ಮಾನವನ ಮನಸ್ಸನ್ನು ಅರಳಿಸುವವನು. ಮಳೆಯ ಬಿಲ್ಲು ಮುರಿದು ಹತ್ತು ಕಡೆಗೆ ಹಂಚಿದಂತೆ, ಹೂವುಗಳಲ್ಲಿ ವಿವಿಧ ವರ್ಣಗಳಿರುತ್ತವೆ. ಇದು ಕಣ್ಣಿಗಾನಂದ ಕೊಡುತ್ತದೆ. ಹೂ ಯಾವುದೇ ಇರಲಿ, ಅವುಗಳ ಪಕಳೆಗಳು 'ಗಾಳೀ ಕೆನೀಲೆ' ಮಾಡಿದಷ್ಟು ಮೃದು; ಇಂಥ ಈ ಹೂವಿನ ಪಕಳೆಗಳೆಂದರೆ- ಪಾತರಗಿತ್ತಿಗಳಿಗೊಡೆದ ರೆಕ್ಕೆಗಳು ! 'ಪಾತರಗಿತ್ತಿ' ಸ್ಪರ್ಶಿಸದ ಹೂವೇ ಇಲ್ಲ. ಅವು -

(೧) ಸೂರೇಪಾನ

(೨) ಕಳ್ಳಿ ಹೂ

(೩) ನಾಯಿಭತ್ತರಿಗಿ ಹೂ

(೪) ರುದ್ರಗಂಟಿ ಹೂ

(೫) ವಿಷ್ಣುಗಂಟಿ ಹೂ

(೬) ಹೇಸಿಗೆ ಹೂ

(೭) ಮದಗುಣಕಿಯ ಹೂ

(೮) ಸೀಗಿಬಳ್ಳಿ ಹೂ

(೯) ಗೊರಟಿಗಿ ಹೂ

(೧೦) ಮಾಲಿಂಗನ ಬಳ್ಳಿ

ಹೂಗಳಲ್ಲಿ ಹಳ್ಳೀ ಹುಡುಗೀಹಾಂಗ 'ಹುಡದೀ ಹುಡದೀ ಆಟ' ವಾಡಿ; ನಂದನವನಕ್ಕೆ ಹಾರಿ ಹೋಗುತ್ತವೆ. ಎಲ್ಲ ಹೂ ಅರಳುವುದು ''ಚುಮುಚುಮು ನಸುಕಿನಲಿ''. ಅವುಗಳ ಸುಗಂಧವೆಂದರೆ ''ಚಿಕ್ಕಮಕ್ಕಳು ನಕ್ಕ ನಗೆ !'' ನಸುಕಿನ ತಂಪಾದ ಗಾಳಿಯ ಸ್ಪರ್ಶದ ಆನಂದ ಮತ್ತು ಕೆಂಪು ಪ್ರಕಾಶದ ಆನಂದವು 'ಹುಂಜ ಕೂಗಿದ' ನೆನಪನ್ನು ಹೂ ಕೊಟ್ಟು ಎಚ್ಚರಿಸುತ್ತದೆ. ಜೇಡನ ಬಲೆಯ ಎಳೆಗಳ ನೆಯ್ಗೆ, ಕವಿಯ ಕಣ್ಣುಗಳಿಗೆ ಹೂವಿನಂತೆ ಆಕರ್ಷಕವಾಗಿ ಕಾಣುತ್ತದೆ, ವಿಸ್ಮಯಭಾವ ಜಾಗೃತವಾಗುತ್ತದೆ. ಹೂಪ್ರಪಂಚದ ರಾಜ-ಮಲ್ಲಿಗೆ ! ಇದರ ''ಗಮುಗಮಾ ಗಮಾಡಿಸುವ ಸುಗಂಧ-ಚಿಕ್ಕಿಯಾಗಿ, ಚಂದ್ರನಾಗಿ, ಗಾಳಿಯಾಗಿ

'ಮುನಿಸಿನಿಂದ ಹೊರಹೊರಟ ರಾಯ'ನನ್ನು ರಮಿಸಲು ಸಮರ್ಥವಾಗುತ್ತದೆ. ಮುದಗೊಂಡ ಮನಸ್ಸಿನ ಕಿವಿಗಳಿಗೆ 'ಕೋಕಿಲ ನುಡಿ ಗಾಯನ' ಕೇಳಿಸುತ್ತದೆ; 'ಗಾಳಿಕೊಳಲು' ತೂಗಾಡಿಸುತ್ತದೆ. ಹೂವುಗಳಲ್ಲಿರುವ ದಿವ್ಯತೆಯನ್ನು ಕಂಡು, ಕೃಪಾಪ್ರಸಾದವೆಂದರೆ- 'ಯಾವ ಹುಲ್ಲಿಗೆ ಎಂಥ ಹೂವಿದು!' ಎಂಬಂಥ ಅರಳುವಿಕೆಯನ್ನು ಬಿಟ್ಟು, ಬೇರೆ ಏನೇನೂ ಅಲ್ಲ ಎಂಬ ಹೊಸ ಸಂದೇಶ ಈ ಕವನ ಸಂಕಲನದ್ದಾಗಿದೆ. ಪಂಚಜ್ಞಾನೇಂದ್ರಿಯಗಳನ್ನು ಆನಂದದಲ್ಲಿ ತೇಲಾಡಿಸಿ, ಮಾನವ ಜನ್ಮ ಸಾರ್ಥಕವಾಯಿತು ಎಂಬ ಭಾವವನ್ನು ಜಾಗೃತಪಡಿಸುತ್ತವೆ ಇಲ್ಲಿಯ ಅಗಾಧ ಕಲ್ಪನೆಯ ವಿವಿಧ ಹೂವುಗಳು ! ಈ ಆನಂದಕ್ಕೆ ಮರಣವಿಲ್ಲ.

'ಸುಗಂಧಂ ಪುಷ್ಟಿವರ್ಧನಂ' ಎಂಬ ಮೃತ್ಯುಂಜಯ ಮಂತ್ರದ ಸಾಲು ಅರ್ಥವಾಗುವುದು ಹೂವುಗಳ ಮಹತಿ ಒಪ್ಪಿಗೆಯಾದಾಗ. ಅಂಬಿಕಾತನಯದತ್ತರು ಯಜ್ಞ ಕರ್ಮಕ್ಕೆ ಮಹತ್ವಕೊಡದೇ, ಹೂವುಗಳನ್ನು ಅರಳಿಸುವ ಕ್ರಿಯಾಯಜ್ಞವನ್ನು ತಮಗೆ ದತ್ತವಾದ ಕಲ್ಪನಾಶಕ್ತಿ ಹಾಗೂ ರೂಪಕ ಶಕ್ತಿಯಿಂದ ಮಾಡಿದ್ದು ಇಲ್ಲಿ. ಬೇಂದ್ರೆಯವರು ''ಈ ಸೃಷ್ಟಿ ಭಗವದ್ದೃಷ್ಟಿ'' ಎಂದು ಕ್ಷಣಕ್ಷಣವೂ ಅನುಭವಿಸಿದವರು. ಮಾನವ ಮರುಜನ್ಮಕ್ಕೆ ಬೇಸತ್ತವರಲ್ಲ. ಜಗತ್ತಿಗೆ ಹಿಗ್ಗನ್ನು ನೀಡುವ ಹೂವುಗಳನ್ನು ತಮ್ಮ ಹಾಡುಗಳಿಂದ ಅರಳಿಸುವಲ್ಲಿ ಸಾರ್ಥಕತೆಯನ್ನು ಕಂಡ ವಿಶ್ವಕವಿ !

ಈ ಹದಿನಾರೂ ಕವನಗಳನ್ನು ಹಿಂದುಸ್ತಾನಿ ಶಾಸ್ತ್ರೀಯ ಸಂಗೀತದ ಧ್ರುಪದ ಗಾಯನ ಪದ್ಧತಿಯಲ್ಲಿ ಹಾಡಿದಾಗ, ಪರಿಣಾಮದ ಔನ್ನತ್ಯವನ್ನು ಅನುಭವಿಸಬಹುದಾಗಿದೆ. ಶಾಸ್ತ್ರೀಯ ಸಂಗೀತಕ್ಕೆ ಶ್ರುತಿಗೊಂಡ ಎರಡು- ತಾನಪುರಾ=ತಂಬೂರಿ ಬೇಕೇ ಬೇಕು. ಹಾಡುಗಾರನ ಧ್ವನಿ ಮತ್ತು ತಾನಪುರಾದ ಧ್ವನಿ ಪರಸ್ಪರ ಸ್ಪಂದಿಸಿ ಶಿಖರ ತಲುಪಿದಾಗ, ಶ್ರೋತೃ ತಲ್ಲೀನನಾಗಿ ಅಮರತ್ವ ಎಂದರೇನು ಎಂಬುದನ್ನು ಅರಿಯುತ್ತಾನೆ. ಈ ಅರಿವು ಮೂಡಿದಾಗ; ಅಂಬಿಕಾತನಯದತ್ತನ 'ಹೂವೆ' ಕವನದೊಳಗಿನ

"ಇದ್ದಲ್ಲಿ ಇರು ಹೂವೆ
ಗಾಳಿಹೊಳೆಯೊಳು ನಾವೆ
ತೂಗಾಡುತಿರುವಂತೆ ತೂಗುತ್ತಿರು

.................................

ಮೈಯ ಬಾನೊಳಗೆತ್ತು
ಅಲ್ಲಿ ಬೆಳಕನು ಬಿತ್ತು
ಮಣ್ಣನ್ನು ಕಂಪತ್ತ ಹೊರಳಿಸುತಿರು"

ಎಂಬ ಸಾಲುಗಳ ಅಂತರಾರ್ಥ ಸ್ಪಷ್ಟವಾಗುತ್ತದೆ ಮತ್ತು ಕವಿ ಮತ್ತು ಹೂ ಸಂಬಂಧ ಅವರ್ಣನೀಯ ಎಂಬ ಹೃದಯೋದಯವಾಗುತ್ತದೆ.

"ಅಂಬಿಕಾತನಯ ಹಾಡಿದನೆಂದರೆ, ಹೂವುಗಳರಳುವವು" ಎಂಬ ಈ ಅಪರೂಪದ ಕವನ ಸಂಕಲನವು ಹಿಂದುಸ್ತಾನಿ ಶಾಸ್ತ್ರೀಯ ಸಂಗೀತ ಸಂಯೋಜನೆಯೊಂದಿಗೆ ಬೆಳಕನ್ನು ಕಾಣುತ್ತಿರುವುದು ಒಂದು ಯೋಗಾಯೋಗ. ಡಾ|| ದ. ರಾ. ಬೇಂದ್ರೆಯವರ ೧೧೨ ನೇ ಜನ್ಮ ದಿನದಂದು ಬೇಂದ್ರೆ ಸಂಗೀತ ಅಕ್ಯಾಡೆಮಿಯು ಸಾಹಿತ್ಯ-ಸಂಗೀತ ಸಮಾಗಮವಾಗಿ ನೀಡಿದ ಒಂದು ವಿಶೇಷ ಕೊಡುಗೆ ಇದಾಗಿದೆ.

"ಬೇಂದ್ರೆ ಕುಟೀರ", ಹುಬ್ಬಳ್ಳಿ.
ವರಕವಿ ಡಾ|| ದ. ರಾ. ಬೇಂದ್ರೆ ೧೧೦ನೇ ವಾರ್ಷಿಕ ಜನ್ಮ ದಿನ
ದಿನಾಂಕ : ೨೧-೨-೨೦೦೮

ಡಾ|| ವಾಮನ ಬೇಂದ್ರೆ
ಸಹ ನಿರ್ದೇಶಕರು
ವರಕವಿ ಡಾ|| ದ. ರಾ. ಬೇಂದ್ರೆ
ಸಂಶೋಧನಾ ಸಂಸ್ಥೆ ಹಾಗೂ ಬೇಂದ್ರೆ ಸಂಗೀತ ಅಕಾಡಮಿ.

ಕಾರ್ಯಸ್ಥಳ : "ಬೇಂದ್ರೆ ಕುಟೀರ", ವಿಶ್ವಶ್ರಮ ಚೇತನ, ಗೋಕುಲ ರಸ್ತೆ, ಹುಬ್ಬಳ್ಳಿ-೫೮೦ ೦೩೦. ದೂರವಾಣಿ : ೨೩೩೦೪೬೬

# ಪ್ರಕಾಶಕರ ನುಡಿ

ಬೇಂದ್ರೆ ಸಂಗೀತ ಅಕ್ಯಾಡೆಮಿಯು ಬೇಂದ್ರೆಯವರ ೧೧೨ನೆಯ ಜನ್ಮದಿನವನ್ನು ''ಅಂಬಿಕಾತನಯ ಹಾಡಿದನೆಂದರೆ ಹೂವುಗಳರಳುವವು'' ಎಂಬ ಔಚಿತ್ಯಪೂರ್ಣ ಕವನ ಸಂಗ್ರಹದ ಬಿಡುಗಡೆಯಿಂದ ಆಚರಿಸುತ್ತಿರುವುದು ಅಭಿಮಾನ ಹಾಗೂ ಆನಂದದ ಘಟನೆಯಾಗಿದೆ. ಈ ಕವನಸಂಕಲನದ ಪ್ರಾರಂಭಕ್ಕೆ ಬೇಂದ್ರೆಯವರೇ ಬರೆದ 'ಕಾವ್ಯದಲ್ಲಿ ಹೂ' ಎಂಬ ಮಹತ್ವದ ಲೇಖನವಿದೆ. ಇದರಲ್ಲಿ ಬೇಂದ್ರೆಯವರು ಜಾನಪದ ಕಾವ್ಯದಲ್ಲಿ ವರ್ಣಿಸಲಾದ ಹಲವಾರು ಹೂವುಗಳನ್ನು ವರ್ಣಿಸುತ್ತ, ಸಂಸ್ಕೃತ ಕವಿಗಳು, ಆಂಗ್ಲ ಕವಿಗಳು ಕಂಡ ದರ್ಶನಗಳನ್ನು ಮುಂಡಿಸಿದ್ದಾರೆ. ವಿಶ್ವಕಾವ್ಯದಲ್ಲಿ ಹೂವುಗಳಿಗೆ ಪ್ರಾಧಾನ್ಯವಿದ್ದದ್ದು ಗಮನಾರ್ಹ. ಹೂ ಕಾವ್ಯದಲ್ಲಿ ಮಾಡುವ ಕ್ರಿಯೆ ಅದ್ಭುತ. ಸೃಷ್ಟಿ-ಹೂ-ಬ್ರಹ್ಮ-ಕಾವ್ಯ ಸಂಬಂಧವನ್ನು ಮನೋಜ್ಞವಾಗಿ ವರ್ಣಿಸಲಾಗಿದೆ. ಇದೇ ರೀತಿ ವಾಮನ ಬೇಂದ್ರೆಯವರ ''ಅಂಬಿಕಾತನಯದತ್ತರ-ಹೂದೋಟ'', ಎಂಬ ಲೇಖನವೂ ಅಂಬಿಕಾತನಯದತ್ತರ ಜೀವನ ಮಹಾಕಾವ್ಯದಲ್ಲಿರುವ ಮಹತಿಯನ್ನು ಎತ್ತಿತ್ತೋರಿಸಿದೆ. ಕವಿ ತನ್ನ ಕಾವ್ಯದಲ್ಲಿ ಹೂವುಗಳನ್ನು ಅರಳಿಸದೇ ಹೋಗಿದ್ದರೆ, ಜೀವನ ಸಾರ್ಥಕ್ಯ ಅಸಾಧ್ಯ ಎಂದು ಮುಂಡಿಸಿದ್ದಾರೆ. ಹೂವಿಲಾಸ, ವಿಕಾಸವೇ ಕಾವ್ಯ ಎಂಬ ಹೊಸ ಕಾವ್ಯಸೂತ್ರ ವಾಮನ ಬೇಂದ್ರೆ ಬಹಿರಂಗಪಡಿಸಿದ್ದಾರೆ. ಹೂವುಗಳಿಗೂ ಸಂಖ್ಯೆಗಳಿಗೂ ಇರುವ ಅದ್ವೈತವನ್ನು ಉದಾಹರಣೆಗಳಿಂದ ಪ್ರತಿಪಾದಿಸಿದ್ದಾರೆ.

೧೯-೨-೨೦೦೦ ದಂದು ''ಭಾರತ ಹುಣ್ಣಿಮೆ'' ಇತ್ತು. ಅಂದು ಇಡೀ ರಾತ್ರಿ ''ಬೇಂದ್ರೆ ಸಂಗೀತ-ಸಂಗಮ'' ಏರ್ಪಡಿಸಿ ಅದಕ್ಕೆ ''ಅಂಬಿಕಾತನಯನ ಹಾಡುಗಳು,

ಬೆಳುದಿಂಗಳ ನೋಡS'' ಎಂಬ ಕಾರ್ಯಕ್ರಮದ ಶುಭಾರಂಭ ಮಾಡಿದ್ದೆವು. ಅದರಲ್ಲಿ ಬೇಂದ್ರೆಯವರ ಕನ್ನಡ ಚೀಜುಗಳನ್ನು ಪಂಡಿತ ಮಾಧವಗುಡಿ , ಶ್ರೀವೆಂಕಟೇಶ ಮಣ್ಣೂರ, ಪಂಡಿತ ಕೃಷ್ಣಾಜಿ ಕುರ್ತಕೋಟಿ, ಪಂಡಿತ ಚಂದ್ರಶೇಖರಸ್ವಾಮಿ ಹಾಗೂ ಶ್ರೀ ರಾಘವೇಂದ್ರ ಗುಡಿ ಇವರುಗಳು ಹಾಡಿದ್ದು, ಒಂದು ವಿಶೇಷವೇ ಸರಿ. ''ರವೀಂದ್ರ ಸಂಗೀತ''ವು ಭಾರತೀಯ ಸಂಗೀತಕ್ಕೆ ಬಂಗಾಲದ ವಿಶೇಷ ಕೊಡುಗೆ. ಅಂತೆಯೇ ಕರ್ನಾಟಕದ ಕನ್ನಡ ಸಂಗೀತ ಕಲಾವಿದರು ''ಬೇಂದ್ರೆ ಸಂಗೀತ'' ವನ್ನು ರಾಷ್ಟ್ರಕ್ಕೆ, ಕರ್ನಾಟಕದ ಕೊಡುಗೆಯಾಗಿ ಕೊಡುವಂತೆ ಕಾರ್ಯೋನ್ಮುಖರಾಗಬೇಕೆಂಬುದು ಬೇಂದ್ರೆ ಸಂಗೀತ ಅಕ್ಯಾಡೆಮಿಯ ಆಶಯ.

ಎಂಟುವರ್ಷಗಳಲ್ಲಿ ''ಬೇಂದ್ರೆ ಸಂಗೀತ ಸಿದ್ಧಾಂತ ಮತ್ತು ಪ್ರಯೋಗ'' ಎಂಬ ಮಹತ್ವದ ಕೃತಿಯನ್ನು ಪ್ರಕಟಿಸಿದ್ದೇವೆ. ಇದಲ್ಲದೆ ''ಬೇಂದ್ರೆ ಸಂಗೀತ'' ಸಾಹಿತ್ಯಕ್ಕೆ, ಹತ್ತು ಕವನ ಸಂಗ್ರಹಗಳನ್ನು ಸಂಗೀತ ಸಂಯೋಜನೆಯೊಂದಿಗೆ ಪ್ರಕಟಿಸಿದ್ದೇವೆ. ಈಗ ಪ್ರಕಟಗೊಳ್ಳುತ್ತಿರುವ ಸಂಗ್ರಹ ಈ ಸಾಹಿತ್ಯ-ಸಂಗೀತ ಮಾಲಿಕೆಯಲ್ಲಿ ಹನ್ನೊಂದನೆಯದು. ಇದರಲ್ಲಿಯ ಹದಿನಾರೂ ಕವನಗಳಿಗೆ ಪಂಡಿತ ಕೃಷ್ಣಾಜಿ ಕುರ್ತಕೋಟಿಯವರು ಹಿಂದುಸ್ತಾನಿ ಶಾಸ್ತ್ರೀಯ ಸಂಗೀತದ ಸ್ವರಸಂಯೋಜನೆ ಮಾಡಿ, ಅವರು ತಮ್ಮ ಮಹತ್ವದ ಕೊಡುಗೆಯ ಬಳ್ಳಿ ಹಬ್ಬಿಸಿದ್ದು ಸ್ತುತ್ಯಕಾರ್ಯ. ಇದೇ ನಾವು ಅಂಬಿಕಾತನಯದತ್ತರಿಗೆ ಅರ್ಪಿಸುತ್ತಿರುವ ವಿನೂತನ ಗೌರವ.

ಈ ಕಾರ್ಯದಿಂದ 'ಬೇಂದ್ರೆ ಸಂಗೀತ' ಎಂಬುದು ಮುನ್ನಡೆ ಸಾಧಿಸುತ್ತಿದೆ ಎಂಬ ಭಾವನೆ ನಮ್ಮದಾಗಿದೆ. ಈ ಮಹತ್ವದ ಕೃತಿಯನ್ನು ರಸಿಕರು ಎಂದಿನಂತೆ ಸ್ವಾಗತಿಸಿ, ಬೆಂದ್ರೆ ಸಂಶೋಧನ ಸಂಸ್ಥೆ ಹಾಗೂ ಬೇಂದ್ರೆ ಸಂಗೀತ ಅಕ್ಯಾಡೆಮಿ ಕಾರ್ಯಕ್ಕೆ ಬೆಂಬಲವನ್ನು ನೀಡುವರೆಂಬ ವಿಶ್ವಾಸದಿಂದ ಈ ಸಂಗೀತ ಕುಸುಮವನ್ನು ಪ್ರಕಾಶನಗೊಳಿಸುತ್ತಿದ್ದೇವೆ.

''ಬೇಂದ್ರೆ ಕುಟೀರ'', ಹುಬ್ಬಳ್ಳಿ.
ವರಕವಿ ಡಾ|| ದ. ರಾ. ಬೇಂದ್ರೆ ೧೧೦ನೇ ವಾರ್ಷಿಕ ಜನ್ಮ ದಿನ
ದಿನಾಂಕ : ೨೧-೨-೨೦೦೮

ಡಾ|| ಕೆ. ಎಸ್. ಶರ್ಮಾ
ನಿರ್ದೇಶಕರು
ವರಕವಿ ಡಾ|| ದ. ರಾ. ಬೇಂದ್ರೆ
ಸಂಶೋಧನಾ ಸಂಸ್ಥೆ ಹಾಗೂ ಬೇಂದ್ರೆ ಸಂಗೀತ ಅಕಾಡಮಿ.

ಕಾರ್ಯಸ್ಥಳ : ''ಬೇಂದ್ರೆ ಕುಟೀರ'', ವಿಶ್ರಮ ಚೇತನ, ಗೋಕುಲ ರಸ್ತೆ, ಹುಬ್ಬಳ್ಳಿ-೫೮೦ ೦೩೦. ದೂರವಾಣಿ : ೨೩೩೦೪೬೬

# ಕಾವ್ಯದಲ್ಲಿ ಹೂ

★.....ವರಕವಿ ಡಾ|| ದ. ರಾ. ಬೇಂದ್ರೆ

ಹೂವಿನ ನೆನಪಾದೊಡನೆ, ಮನಸ್ಸು ಗವ್‌ಗವಮಾಡಿಸುವದು; ಹುಣಿಸೆಹಣ್ಣಿನ ನೆನಪಾದೊಡನೆ ಬಾಯಿಗೆ ನೀರು ಬಿಡುವಂತೆ. ಹೂ! ಫ್ಲೋವರ್! ಪುಷ್ಪ! ಫೂಲ್! ಹೂವಿಗೆ ಯಾವ ಹೆಸರಿದ್ದರೇನು? ಅದರ ವಾಸನೆಗೆ ಕೊರತೆಯಿಲ್ಲ - ಎನ್ನುವ ಮಾತೊಂದಿದೆ. ಆದರೆ ಇದೇನು ಮಾತು? ಭರತಖಂಡಕ್ಕೆ ಇಂಡಿಯಾ ದೇಶ ಎಂದರೆ ಏನು ರುಚಿ? ಅರ್ಥಕ್ಕೆ ತಕ್ಕ ಶಬ್ದಬೇಕು; ರೂಪಕ್ಕೆ ತಕ್ಕ ನಾಮಬೇಕು. ''ಹೂ'' ಎಂಬ ಹೆಸರಿನಲ್ಲಿಯೇ ಕಾವ್ಯ ತುಂಬಿದೆ. ಫೂಲ್, ಪುಷ್ಪ, ಫ್ಲೋವರ್ ಎಂಬ ಹೆಸರು ''ಹೂ''ವಿಗೆ ಬಲು ಭಾರ ! ಸೌಂದರ್ಯದರ್ಶನದಿಂದ ಸೃಷ್ಟಿಕರ್ತನಿಗಾದ ಆನಂದದ ''ಹುಂ''ಕಾರವೇ ಹೂ ; ಹೂ ಆಗಿ ಭೂಮಿಯ ಮೇಲೆ ಅರಳಿತು ಎಂದು ಅಂಬಿಕಾತನಯದತ್ತರ - ಒಂದು ಕವನದಲ್ಲಿ ಹೇಳಿದೆ. ಇದು ಕವಿಕಲ್ಪನೆ ಎನ್ನಬಹುದು! ಯಾರು ಅಲ್ಲಾ ಎಂದಾರು? ಬಣ್ಣ, ರಸ, ರೂಪ, ಸುಗಂಧ, ನಾಜೂಕು ಎಲ್ಲಾ ಒಂದು ಮಾಡಿದ ಕಲ್ಪನೆ ದೇವರದಾದರೆ; ಅದಕ್ಕೆ ಹೂ ಎಂದು ಹೆಸರು ಕೊಟ್ಟದ್ದು, ಯಾವುದೋ ಅನಾದಿ, ಅಜ್ಞಾತ ಕವಿಯದು. ''ಹೂ''ವಿನಿಂದಲೆ ''ಪೂಜೆ'' ಬಂತು ಎನ್ನುತ್ತಾರೆ. ಸೃಷ್ಟಿಕರ್ತ ಬ್ರಹ್ಮನೇ ಹೂವಿನ ಹೊಡೆಯಲ್ಲಿ ಹುಟ್ಟಿದ್ದಾನೆ. ನಮ್ಮ ದೇವತೆಗಳ ಕಣ್ಣು, ಮುಖ, ಕೈ, ಅಡಿ,

ಎಲ್ಲವೂ ಕಮಲಾಕಾರ - ಪಾದಕಮಲ, ಕರಕಮಲ, ಮುಖಕಮಲ, ನಯನಕಮಲ! ಅದೇಕೆ, ನಮ್ಮ ದೇಹಾಂತರಂಗದಲ್ಲಿಯೂ ಚತುರ್ದಳ, ಅಷ್ಟದಳ, ದ್ವಾದಶದಳ, ಕಮಳಗಳು ಅಕ್ಷರಗಳಿಂದ ಅಲಂಕೃತವಾಗಿವೆಯಂತೆ. ಅಂದಮೇಲೆ, ಹೂವಾಗಿ ಅರಳುವ ಹೃದಯಕಮಲದಿಂದ, ಹೂ ಹೂವಾಗಿ ಅರಳುವ ನಿಸರ್ಗಸೌಂದರ್ಯವನ್ನು ಕಂಡು, ಮಾತಿನ ಹೂಮಾಲೆಗಳು ಸಾಲು ಸಾಲಾಗಿ ಬಂದರೆ, ಏನು ಆಶ್ಚರ್ಯ? ನಾವು ದೇವರಿಗರ್ಪಿಸುವದು ಮಂತ್ರಪುಷ್ಪ, ಏರಿಸುವದು ಹೂವು, ಯಾವ ಪ್ರಸಾದಕ್ಕಿಂತಲೂ ದೇವರ ಕೃಪೆಯಾಗಿ ಉರುಳುವ ಹೂವಿನ ಪ್ರಸಾದ ದೊಡ್ಡದು. ದೇವರಿಗೆ ಹೂವಿನ ಪೂಜೆಯನ್ನು ಕಟ್ಟಿ ಹೂವಿನ ಪ್ರಸಾದ ಬೇಡುವದು ನಮ್ಮ ನಾಡಜನರ ವಾಡಿಕೆ. ಅಂತೆಯೇ,

''ತರುಣಿಯರಿಗೆ - ''ನಿನ್ನ ಕರುಣಾಪುಷ್ಪವ ಕರುಣೇಸೆ
ಉರಗವೇಣಿಯೆ, ನಿನ್ನಾಭರಣದ ಹೂ ಕರುಣೇಸೆ''

ಎಂದು ಹಾಡಿ ಬೇಡುವದುಂಟು.

''ನಲ್ಲ ಹುಡುಕಿದರೆಲ್ಲೆಲ್ಲಿ ಸಿಗಲೊಲ್ಲನವ್ವ ಕೇಳವ್ಮಾತೊಂದ'' ಎಂದು ಆರಂಭಿಸುವ ಜಾನಪದ ಗೀತವೊಂದು, ದೇವ ದೇವತೆಗಳಿಗೆ ಅರ್ಪಿಸಿದ ಹೂ ಹೂಗಳ ಹೆಸರಿನ ಮಾಲೆಯನ್ನೇ ಹಾಡುವಂತಿದೆ.

''ಸೊಗಲದ ಸೋಮೇಶ್ವರನಿಗೊಯ್ದೆ ನಾ
ಸೊಗಸಿನಿಂದ ಚೊಗಚೆಯ ಹೂವ!
ಪಂಢರಿನಾಥಗೆ ಗೊಂಡೆವಕಟ್ಟ ತುರಾಯಿಯಿಟ್ಟ
ತುಳಸಿಯ ಹೂವ! ಕಪ್ಪತ್ತೇಶ್ವರನಿಗೇ
ವೊಯ್ದೆ ನಾ, ತಪ್ಪದಾಂಗೆ ತಾವರಿಹೂವ!
ಗೋಕರ್ಣದ ಮಾಬಳೇಶಗೊಯ್ದೆ ನಾಲ್ಕು ಬಣ್ಣ-
ದೆಸಳಿನ ಹೂವ!

ಯಮನೂರೊಡೆಯಗೆ ಕಾಮಿಸಿ ಒಯ್ದೆನು
ಕಾಮಕಸ್ತೂರಿಗೊನಿ ಹೂವ!
ವೆಂಕರಮಣಗೆ ಶಂಕೆಯಿಲ್ಲದೆ ಒಯ್ದೆ ನಾನು
ಶಾವಂತಿಗೆ ಹೂವ!
ಉಳವಿಯ ಬಸವಣ್ಣನಿಗೆ ಒಯ್ದೆ ನಾ ಬೆಳೆದ್ನ
ಬಸವನಪಾದದ ಹೂವ!
ಕಲ್ಯಾಣದ ಬಸವಣ್ಣಗೊಯ್ದೆನೇ ಧಾತ್ರಿ ಬಲ್ಲ
ಮಲ್ಲಿಗೆ ಹೂವ!
ಗಂಧ-ಪತ್ತರಿ, ಗಮಕಿಲೆ ಹರದೆನೆ ಗದುಗಿನ
ವೀರನಾರಾಯಣನಿಗೆ.
ಹಾವಳಮಲ್ಲಿಗಿ, ನಿವಳ ಪತ್ತರಿ ಹಳಕಟ್ಟಿಯ
ವೀರಭದ್ರನಿಗೆ''

ಹೀಗೆಯೆ, ನಾಗಸಂಪಿಗೆ, ಸುಗಂಧಿ ಹೂ, ಕರೇಕಮಲ, ಕಾಶಿ-ಬೆಂಡಿ ಹೂ, ದವನ, ಮರುಗ, ಕ್ಯಾದಿಗಿ, ಮದುಗುಣಿಕೆ, ಇಪ್ಪೆ ಹೂ, ಚೆಂಡು ಹೂ ಎಲ್ಲ ಸೂರಿಯಾಗುತ್ತವೆ.

ಹಳ್ಳಿಗರ ಬಾಯೊಳಗಿರುವ ಹೂವಿನ ಹೆಸರು ಕೇಳಿದರೇ ಕಲ್ಪನೆ ಕೆರಳುತ್ತದೆ - ಮನಸ್ಸು ಧುಂದಾಗುತ್ತದೆ. ಬೇರೆ ಕಾವ್ಯ ಯಾಕೆ ಬೇಕು? ಹಂಸಪಾದಿ, ಕಾಮಲತೆ, ಹಂದರ ಹೂ, ಗೌರೀಹೂ, ಕರ್ಣಕುಂಡಲ, ಶಂಕಾಸುರ, ಆಕಾಶಗರುಡ, ಅಧೋಮುಖ, ಇಂದ್ರಪುಷ್ಪ, ಕನಕಾಂಬರ, ಮುಚಕುಂದ, ಅಮರಗಂಧಿ, ರಾವಣನ ಮೀಸೆ, ಬ್ರಹ್ಮದಂಡ, ಆದಿರಾಜ, ಇರುವಂತಿಗೆ, ಸೂರ್ಯಕಾಂತಿ, - ರುದ್ರಗಂಟಿ, ನಂದಿಬಟ್ಟಲು, - ಈ ಹೆಸರೇ ಕಾವ್ಯಕ್ಕೆ ಪ್ರೇರಣೆ ಕೊಡುವಂತಿವೆ. ಶಬ್ದ ಸೃಷ್ಟಿಯ ಮೂಲ - ಕಾವ್ಯ. ಹೂವಿನ ಹೆಸರುಗಳಂತೂ ರಸಾತ್ಮಕವಾದ ಮೂರ್ತಿಮಂತ ಶಬ್ದಗಳು! ಉತ್ಪಲ, ಕುವಲಯ, ಕುಮುದ, ಕೈರವ, ಇಂದೀವರ, ತಾಮರಸ, ಪುಂಡರೀಕ, ಏನೀ ಕಮಲ ಪುರಾಣ! ಪುಂಡರೀಕ! ಎಂದೊಡನೆ, ಮಹಾಶ್ವೇತೆ ಕಣ್ಣೆದಿರು ಬಂದು, ವನಲಕ್ಷ್ಮಿಯ

ಸಂತಾನದ ಮಹಾಕಾದಂಬರಿಯೇ ತೆರೆಯುವದು. ಅಜವಿಲಾಪವು ಕಾಲಿದಾಸನ ಕಾವ್ಯೋದ್ಯಾನದ ಕಟುಮಧುರವಾದ ಪುಷ್ಪ. ಸ್ವರ್ಗದ ಪುಷ್ಪಮಾಲೆ, ಮೈಮೇಲೆ ಬಿದ್ದು, ಕುಸುಮಕೋಮಲೆಯಾದ ರಾಣಿ ಕೈಲಾಸವಾಸಿಯಾದಳಂತೆ. ಈ ಪುಷ್ಪಗಳ ದಂತಕತೆಯನ್ನು ಒಡೆದು ಹೇಳಬೇಕೆ?

"In eastern lands they talk in flowers, and tell in a garland their loves and cares" ಎಂದು ಒಬ್ಬ ಪಾಶ್ಚಿಮಾತ್ಯ ಚತುರರು ನುಡಿದಿದ್ದಾರೆ. ಲಕ್ಷ್ಮೀಶ ಕವಿಯು ಒಬ್ಬ ಸುಂದರಿಯ ನಗೆಮೊಗದ ಸೌಂದರ್ಯ ಬಣ್ಣಿಸುವ ರೀತಿ ಹೀಗಿದೆ-

''ಉಲ್ಲಾಸ ತಿಲಕಮುಂ ಸುತಮಾಲಪತ್ರಮುಂ
ಮೊಲ್ಲೆಯ ಮುಗುಳ್ಗಳುಂ ಚೂತಪ್ರವಾಳಮುಂ
ಮಲ್ಲಿಗೆಯಲರ್ಗಳುಂ ಸಂಪಗೆಯ ಮೊಗ್ಗೆಯುಂ
ನಿಂಬಿದಳಮುಂ ತೊಳಗುವ
ಸಲ್ಲಲಿತ ಸಾಲು ಕಾನನದೊಳಿರ್ದಪುವು''

ಪುಷ್ಪವತಿಯಾದ ಸೀತೆಯನ್ನು ವಸಂತ ಲಕ್ಷ್ಮಿಗೆ ಹೋಲಿಸಿ-

''ಮಲ್ಲಿಕಾಸ್ಮಿತರುಚಿರೆ, ಕುಂದಕುಟ್ಮಲರದನೆ
ಪಲ್ಲವಾಧರೆ, ಭೃಂಗ ಕುಂತಳೆ, ಕುಸುಮಗಂಧಿ
ಸಲ್ಲಲಿತ ಕೋಕಿಲಾಲಾಪೆ ಚಂಪಕವರ್ಣೆ, ಮೃದು
ಮಧುರ ಕೀರವಾಣಿ।
ಫುಲ್ಲಲೋಚನೆ, 'ಚಾರುಚಂದ್ರಬಿಂಬಾನನೆ, ಲಸಲ್ಲತಾಗಾತ್ರಿ ಜಾನಕಿ''

ಎಂದು ಬಣ್ಣಿಸುವನು.

ಹೂಗಳೊಡನೆ, ಇಡೀ ಉಪವನವೇ, ವಸಂತಮಾಸವೇ, ಆಕಾಶಪರ್ಯಂತವಾದ ದಿಗ್ದೇಶವೇ, ಎಲ್ಲ ಬ್ರಹ್ಮಾಂಡವೇ ಮಾಲೆಯಾಗಿ ಬರುವುದು.

ಸಂಸ್ಕೃತ ಕವಿಗಳ ಋತುವರ್ಣನಾ ಸಮಯಗಳನ್ನು ಪರಿಪಾಲಿಸುತ್ತ, ಕನ್ನಡ ಕವಿಗಳು ತಮ್ಮ ಪ್ರತಿಭೆಯ ನವೋನವತೆಯನ್ನು ಪ್ರಕಟಿಸಿರುವರು. ಆದರೆ ಅವರು, ಅನ್ಯೋಕ್ತಿ ಅಲಂಕಾರವನ್ನು, ಒಂದು ಕಾವ್ಯಪ್ರಕಾರವನ್ನಾಗಿ ಬೆಳೆಸಿಕೊಂಡು ಬಂದಂತೆ, ಕನ್ನಡದಲ್ಲಿ ಅಷ್ಟಾಗಿ ಇಲ್ಲ. ಮಾಲತಿ, ಕೇತಕಿ, ಬಕುಲ, ಬೊಬ್ಬುಳಿ, ಚಂಪಕ ಮೊದಲಾದವುಗಳನ್ನು ಕುರಿತಿರುವ ಅನ್ಯೋಕ್ತಿಗಳಲ್ಲಿ, ಮಾನವೀಯ ಮನದ ಗುಣದೋಷಗ್ರಹಣದೃಷ್ಟಿ ವ್ಯಕ್ತವಾಗುವುದು. ಆಂಗ್ಲಕವಿಗಳು, ಲೆಸ್ಸರ್ ಕ್ಯಾಲೆಂಡಾಯಿನ್, ಮೇರಿಗೋಲ್ಡ್, ಟ್ಯೂಲಿಪ್, ಗುಲಾಬಿರೋಝಾ, ವ್ಹಾಯೋಲೆಟ್, ಪ್ರಿಮರೋಜ, ಡೇಝೀ, ಮೊದಲಾದ ಹೂವುಗಳನ್ನು ಕುರಿತು ತಮ್ಮ ಪ್ರತಿಭಾವಿಲಾಸ ಬಿತ್ತರಿಸಿದ್ದಾರೆ. ಅದೇಕೆ? ಕಡಲ-ಕಸಕಡ್ಡಿಗಳಲ್ಲಿಯೂ ಸೌಂದರ್ಯ ಕಂಡು ಒಬ್ಬ ಕವಿ:-

"ಕಸಕಡ್ಡಿಯೆಂದೊಮ್ಮೆ ಕರೆಯಬೇಡಿ, ನಾವು ಇಹೆವಣ್ಣ ಕಡಲ-ಹೂವು"-

ಎಂದು ಹೇಳಿದ್ದಾನೆ.

ವ್ಹಾಯೋಲೆಟ್-ಸಂನ್ಯಾಸಿನಿಯಂತೆ; ಟ್ಯೂಲಿಪ್ ಹೂವು - ರಾಜ್ಯಸಭೆಯ ರಾಣಿಯಂತೆ; ಪಕಳೆ-ಪಕಳೆಯ ಗುಲಾಬಿ-ವಿವಸ್ತ್ರಳಾಗುತ್ತ ನೀರಿಗಿಳಿಯುವ ಅಪ್ಸರೆಯಂತೆ; ಕವಿಗಳ ಮುದ್ದಿನ ಮಗಳು - ಡೇಝೀಯಂತೆ; ಪ್ರಿಮರೋಝು ಹೂಗಳ ಗುಚ್ಛ ನೋಡುತ್ತ ನಿಂತರೆ, ಗುಂಗಾಗಿ ತಲೆದೂಗಿ ತೂಕಡಿಕೆ ಬರುವಂತೆ. ಅಮರಂಥ ಎಂಬ ಹೂವು, ಮಾನವನ ಪಾಪದಿಂದ ಇಲ್ಲಿಯ ಉಪವನ ಬಿಟ್ಟು, ಇಂದ್ರನ ನಂದನವನಕ್ಕೆ ಹೋಯಿತೆಂದು ಒಬ್ಬ ಕವಿ ಹೇಳುತ್ತಾನೆ. ನಮ್ಮ ಪಾರಿಜಾತ - ಶ್ರೀಕೃಷ್ಣ ಸತ್ಯಭಾಮೆಯರ ಶೃಂಗಾರಕೌತುಕಕ್ಕಾಗಿ, ಭೂಮಿಗೆ ಅವತರಿಸಿತು. ವರ್ಡ್ಸ್‌ವರ್ಥನ ನಿಸರ್ಗಪ್ರೇಮ, ಎಲಿಝಬೆತ್ ಬ್ಯಾರೆಟ್ ಬ್ರೌನಿಂಗ್ ಕವಯಿತ್ರಿಯ ಪುಷ್ಪಾನುರಾಗ, ಶೆಕ್ಸಪಿಯರ, ಕೀಟ್ಸ್‌ರ ಸೌಂದರ್ಯ ದೃಷ್ಟಿ, ಶೆಲ್ಲಿಕವಿಯ ಸಾಂಕೇತಿಕ ಶೈಲಿ ಇವುಗಳು, ಆಂಗ್ಲಕಾವ್ಯದಲ್ಲಿ ಪುಷ್ಪೋದ್ಯಾನವನ್ನೇ ನಿರ್ಮಿಸಿವೆ. ಪುಷ್ಪವರ್ಣನಾ ನಿಮಿತ್ತದಿಂದ, ಮಾನವ ಹೃದಯ, ವಾಸನೆಗಳನ್ನೂ ಹೊರಗೆಡವಿವೆ.

ಪ್ರಾಚೀನ ಕನ್ನಡ ಕವಿಗಳಲ್ಲಿ ಪಂಪ, ಹರಿಹರ ಕವಿಗಳು ಪುಷ್ಪ ವರ್ಣನೆಯಲ್ಲಿ ತಮ್ಮ ವ್ಯಕ್ತಿತ್ವವನ್ನು ಪ್ರಕಾಶಗೊಳಿಸಿದ್ದಾರೆ. ಎಲ್ಲ ಚಂಪೂಕವಿಗಳು ಮಾವು, ಮಲ್ಲಿಗೆಗಳಿಗೆ ತಮ್ಮ ಕಾಣಿಕೆ ಸಲ್ಲಿಸಿದ್ದಾರೆ. ''ಭದ್ರಂ ಶುಭಂ ಮಂಗಳಂ'' ಎಂದಿದ್ದಾರೆ.

''ಅಳಿಯೆರಗದ, ಅನಿಲಸಲುಗದ, ರವಿಕರಂಪುಗದ
ಸುಳಿಗೊಂಡು, ದಳವೇರಿ, ಹಸುರಳಿದು, ಬೆಳುಪುಳಿದ
ಸುರುಚಿರಂ ಎನಿಪ್ಪ ಮೀಸಲ ಮೊಗ್ಗೆಯಂ ಕೊಂಡು''

ಎಂದು ವರ್ಣಿಸುವಾಗ, ಹರಿಹರ ಕವಿ - ಮೀಸಲ ಶೀಲವಂತಿಕೆಯನ್ನು ಸೂಸಿದ್ದಾನೆ. ಹರಿಹರನ ''ಪುಷ್ಪರಗಳೆ''ಯು ಒಂದು ಬಗೆಯಿಂದ ಮೀಸಲು ಕವಿತೆ ಎನ್ನಬಹುದು.

''ಏನವ್ವ ಸಂಪಗೆಯೆ, ಶಿವನ ಸಿರಿಮುಡಿಗಿಂದು
ನೀನೀವ ಹೊಸ ಕುಸುಮವಂ ನೀಡು ನೀಡೆಂದು
ಅಳಿಮನದ ಪರಿಯೆಂದು ಬಗೆಯದಿರು''

ಎಂದು ಔದಾರ್ಯವನ್ನೂ ಪ್ರಕಟಿಸಿದ್ದಾನೆ.

''ಪಡೆದೊಡೆ ಕಂಪಂ, ಬಣ್ಣಂ ಬಡೆಯವು,
ಬಣ್ಣಮನೆ ಪಡೆದು ವಪ್ಪೊಡೆ, ಕಂಪಂ ಬಡೆಯವು
ಉಳಿದ ಅಲರ್ಗಳ್
ಎರಡುಮಂ ಒಡೆವೆಳೆದೀ ಚಂಪಕಕ್ಕೆ
ಪೂಗಳ್ ದೊರೆಯೇ?''

ಎಂದು, ಚಂಪಕ ಪಕ್ಷವೆತ್ತಿ, ಪಂಪ ಸವಾಲು ಹಾಕುತ್ತಾನೆ.

''ಸೊಡರ ಬೆಳಗಿನೊಳ್ ಕೊರಗುವ ಜಾಜಿ,
ತುಂಬಿಯೊಳ್ ಪಗೆಗೊಂಡ, ಸಂಪಿಗೆ,

ಮುಡಿಯೆ ಸೊಗಯಿಸಿದ ಅದಿರ್ಮುತ್ತೆ,
ಮಸಿಯೊಳೆ ಸವನಾದ ಗೊಜ್ಜಗೆ,
ನುಡಿಯಲಕ್ಕುಮೆ ಪೂಗಳೊಳಕ್ಕುಮೆ''

ಎಂದು ಅವುಗಳ ಜಾತಿಸ್ವಭಾವವನ್ನು ಪಂಪ ವರ್ಣಿಸುತ್ತಾನೆ.

ಇಂದಿನ ಕನ್ನಡ ಕವಿತೆಯಲ್ಲಿಯೂ ಹೂವಿನ ಸುಗಂಧ ತುಂಬಿ ಹರಿದಿದೆ. ಮಾಸ್ತಿಯವರ ''ಕಾಡ ಹೂಗಳು'' ಎಂಬ ಕವನವು ಅಸಾಧಾರಣವಾದುದು.

''ರಾಗಿಯ ಪೈರಿನ ಮಧ್ಯದಿ ಮುಳ್ಳಲಿ
ಕೊಂಬಿನ ಸುಂದರ ಇಗೊ ಗುಬ್ಬಚ್ಚಿ।
ಬದುವಿನ ಗಿಡದಲ್ಲಿ ಊದಾಬಣ್ಣದ
ಚಳ ತುಂಬಿನ ಚೆಲು ಹೂವಿನ ಕುಚ್ಚು॥''

ಇದೇ ಬಗೆಯಾಗಿ ದತ್ತೂರಿ, ತುತೂರಿ, ಬೊಂತೆಯಕಳ್ಳಿ, ವಿಷ್ಣುಕ್ರಾಂತಿಗಳನ್ನು ಬಣ್ಣಿಸಿದ್ದಾಗಿದೆ. ಅಂಬಿಕಾತನಯದತ್ತರ ''ಪಾತರಗಿತ್ತಿಪಕ್ಕಾ'' ''ಶ್ರಾವಣದ ವೈಭವ'' ''ಪಾರಿಜಾತ'' ಮುಂತಾದ ಕವನಗಳಲ್ಲಿ, ಮಲೆನಾಡಿನ ಹೂಗಳ ಸೂರೆಗೊಳ್ಳುವ ಸೊಗಸು ಮೂಡಿಬಂದಿದೆ. ಕಾಶಿ ವಿಶ್ವನಾಥ ಸೆಟ್ಟಿಯವರು, ''ರಜನಿಗಂಧಿ''-''ರಾತಕೀ ರಾಣಿ''ಯನ್ನೂ, ವಿನಾಯಕ ಗೋಕಾಕರು ಒಂದು ಸುನೀತದಲ್ಲಿ ''ತುಳಸಿ''ಯನ್ನೂ, ಮಾಸ್ತಿಯವರು ''ತಾವರೆ''ಯ ಪ್ರಾತಿನಿಧಿಕವಾದ ಸೌಂದರ್ಯವನ್ನೂ, ಮನಸಾರೆ ಹೊಗಳಿದ್ದಾರೆ. ಕೆ. ವಿ. ಸುಬ್ಬಣ್ಣ ತಮ್ಮ ''ಹೂವು ಚೆಲ್ಲಿದ ಹಾದಿ''ಯಲ್ಲಿ-ಕೆಂಡಸಂಪಿಗೆ, ಬೆಣ್ಣೆಹೂ, ರಂಜಲೆ, ಗೌರಿಹೂಗಳಿಂದ ಚಿತ್ರಮಯವಾದ ಮಲೆನಾಡನ್ನು ಬಣ್ಣಿಸಿರುವರಲ್ಲದೆ, ''ಹೂಗಳಿಗೆ'' ಜೋಗುಳಹಾಡಿ, ಅವುಗಳ ಶಾಂತ ಸೌಂದರ್ಯವನ್ನು ಪ್ರತೀತಿಗೆ ತಂದಿದ್ದಾರೆ. ''ಕಾವ್ಯಾನಂದ''ರ - ಪುಷ್ಪವರ್ಣನಾ ವೈಖರಿಯ ಒಂದು ಪ್ರಕಾರವನ್ನು ಹೇಳಿ, ಈ ಪುಷ್ಪಪುರಾಣ ಮುಕ್ತಾಯಮಾಡುತ್ತೇನೆ.

"ಆ ಕಮಲ ಓಂಕಾರ ಮಲ್ಲಿಗೆಯು ಶ್ರೀಕಾರ
ಸಂಪಿಗೆಯೆ ಭಾವಿಸಲು ಉದ್ಗಾರವು
ಜಾಜಿ ಪ್ರಶ್ನಾರ್ಥಕವು, ವಿಷ್ಣುಕ್ರಾಂತಿ ವಿಸರ್ಗ
ಪಾರಿಜಾತವೆ ಪೂಜಿ ಅನುಸ್ವಾರವು
ದೊಡ್ಡ ಹೂ ವ್ಯಂಜನವು, ಸಣ್ಣ ಹೂವೆ ಸ್ವರವು"

ಹೀಗಿದೆ ಸೌಂದರ್ಯ ಸಂಹಿತೆಯೊಳಗಿನ ಪುಷ್ಪಾಕ್ಷರವು. ಮುಕ್ತಾಯದ ಮೇಲೂ ಮೀಸಲೆಂದು ಹೇಳಬಹುದಾದ ಮಾತಿದೆ. ಹೀರೆಹೂವನ್ನು ವರ್ಣಿಸಿ, ಸಾಮಾನ್ಯದ ಸೌಂದರ್ಯಕ್ಕೆ ಆರತಿ ಎತ್ತಿದ "ಕುವೆಂಪು" ಅವರು - ಹೂವನ್ನು ಸರಿಯಾಗಿ ಕಂಡರೆ, ಅದನ್ನು ಕಂಡದ್ದೆ ಸಾಕ್ಷಾತ್ಕಾರ; ಅದರ ತೋರಿಕೆಯೆ ಅವತಾರ - ಎಂದು ಇತ್ತೀಚೆ ಉಗ್ಘಡಿಸಿ, ಕಾವ್ಯವಾಣಿಗೆ ಹೂವಿನ ಕಳಸವಿಟ್ಟಿದ್ದಾರೆ.

# ''ಅಂಬಿಕಾತನಯದತ್ತ''ರ ಹೂದೋಟ

★.......ಡಾ॥ ವಾಮನ ಬೇಂದ್ರೆ

''ಅಳಿಗಳೆರಗದ ಗಂಧವಹನಲುಗದಲರ್ಗಳಂ
ಎಳಸಿ ತಂದೆಂ ತಂದೆ ಪೊಚ್ಚ ಪೊಸ ಪೂಗಳು''

– ಹರಿಹರ : 'ಪುಷ್ಪರಗಳೆ'

ಇದು ಆಶ್ಚರ್ಯ! ಅಳಿಗಳು ಎರಗದ, ಗಂಧವಹನು ಅಲುಗದ ಹೂ ಇರುವುದು ಸಾಧ್ಯವೇ? ಕವನದಲ್ಲಿ ಸಾಧ್ಯ; ಆದರೆ ನಿಸರ್ಗದಲ್ಲಿ ಇದು ಅಸಾಧ್ಯ. ಹೂ ಇದ್ದಲ್ಲಿ ಭ್ರಮರ ಇರಲೇಬೇಕು. ಗಾಳಿ ಇಲ್ಲದ ಸ್ಥಾನವೇ ಇಲ್ಲ. ಹೂವಿಗೆ ವಾಸನೆಯಿದೆ, ಸೌಂದರ್ಯವಿದೆ. ಎಲ್ಲ ಮಾನವರನ್ನು, ಹಾಗೆಯೇ ಭ್ರಮರಗಳನ್ನು ಆಕರ್ಷಿಸುವ ಸಾಮರ್ಥ್ಯವಿದೆ ಹೂಗಳಲ್ಲಿ. ಹೂವನ್ನು ಕಂಡಾಗ ನಮಗೆ ಆನಂದವಾಗುವುದು ಸ್ವಾಭಾವಿಕ. ಹೂ, ಇದೂ ಒಂದು ಆನಂದದ ಉಗಮಸ್ಥಾನ.

ವರಕವಿಗಳಾದ ಅಂಬಿಕಾತನಯದತ್ತರು ತಮ್ಮ ಮನೆಯನ್ನು ''ಸಖೀಗೀತ''ದಲ್ಲಿ ವರ್ಣಿಸಿದ್ದು ಹೀಗೆ-

''ಅಲ್ಲಿ ಸಂಪಿಗೆಯಿತ್ತು ಪಾರಿಜಾತಕವಿತ್ತು,
ಮಾವು ಮಲ್ಲಿಗೆಯಿತ್ತು ಮನೆಯಿದಿರು
ಮುಗಿಲು ಮಲ್ಲಿಗೆಯಿತ್ತು ತೆಂಗಿತ್ತು ಹಲಸಿತ್ತು
ನಿಂಬಿಯ ಇಂಬಿತ್ತು ಎಡೆಯೆಡೆಗೆ

ಹೊಂಗೆಯು ಹೂವಿನ ರಂಗವಲ್ಲಿಯ ಬಿಡಿಸಿ
ನೆರಳನು ನೀಡುತ ನಿಲ್ಲುವುದು.
ಮುತ್ತುಗ, ಬೂರಲ, ದೀಪಮಾಲೆಯ ಕಂಬ
ಗಗನದ ಬಯಲೊಳಗೆತ್ತುವುದು.''

ಈಗ ಅವರ ಮನೆಗೆ ಹೋದರೆ, ಅಲ್ಲಿ ಇಲ್ಲಿ ಮಲ್ಲಿಗೆ; ಮನೆಯ ಎಡಕ್ಕೆ ಒಂದು ಪಾರಿಜಾತ, ಬಲಕ್ಕೆ ಒಂದು ಮುಗಿಲ ಮಲ್ಲಿಗೆ - ಇಷ್ಟನ್ನೇ ಕಾಣುತ್ತೇವೆ. ಹೂವಿನ ಸೌಂದರ್ಯಕ್ಕೆ ಮನಸೋತ ಬೇಂದ್ರೆಯವರ ಮನದ ಸುತ್ತೂ ಮುತ್ತೂ ವ್ಯಾಪಿಸಿ, ಸುಗಂಧ ಬೀರುತ್ತಿದೆ ಅವರ ಕವನಗಳ ಹೂದೋಟ!

ಅಂಬಿಕಾತನಯದತ್ತರು ಮಾತಿನ ಗಾರುಡಿ ಬಲ್ಲವರು. ''ಮಾತು ಮಥಿಸಿ ಬಂದ ನಾದದ ನವನೀತ'' ತೆಗೆಯುವವರು. ಇವರು ಪ್ರತಿದಿನ ಏಳುವುದು ಬೆಳಿಗ್ಗೆ ತಡವಾಡಿ; ರಾತ್ರಿ ಮಲಗುವುದು ಯಾವಾಗ ಎಂಬುದು, ಯಾವಾಗಲೋ ನಿದ್ದೆಹೋದವರಿಗೆ ತಿಳಿಯುವುದೆಂತು? ಮಲಗಿದವರನ್ನು ಎಬ್ಬಿಸುವುದೇ, ಎಚ್ಚರಿಸುವುದೇ ಅವರ ಮಾತಿನ ಮರ್ಮವಾಗಿದೆ. ೧೯೩೨ರಲ್ಲಿ ಪ್ರಕಟವಾದ ಅವರ ''ಗರಿ'' ಎಂಬ ಕವನಸಂಗ್ರಹದಲ್ಲಿ ''ನಿರಾಶೆ'' ಎಂಬ ಒಂದು ಕವನವಿದೆ. ಅದರಲ್ಲಿ -

''ಮಂಜಿಬ್ಬನ್ನಿಗಳು ಎರೆಯುವ ತಾವು,
ಬೆಟ್ಟದ ಕೋಡಲಿ ಬೆಳೆದಿತು ಹೂವು,
ಇದ ಮೂಸಿದರೂ ವಾಸನೆಯಿಲ್ಲ;
ಹುಟ್ಟಿತೇಕೊ ಹುಟ್ಟಿಸಿದವ ಬಲ್ಲ.
ಕಣ್ಣ ಸೆಳೆದರೂ ಸೋಲಿಸಲಿಲ್ಲ,
ಮನವ ಸೆಳೆದರೂ ಸೆರೆಗೊಳಲಿಲ್ಲ,
ಗಾಳಿ ತಟ್ಟಲಿದು ಅಲೆಯಲೆ ಇಲ್ಲ,
ತಟ್ಟಿದ ಗಾಳಿಯು ನಲಿಯಲು ಇಲ್ಲ
ಸೆಟೆದ ಹೂವು ಸೆಟೆಸೆಟೆದೇ ಇತ್ತು,
ಬಿರುಗಾಳಿಯ ಮೈ ಮರಗಟ್ಟಿತ್ತು''.

ಇದು ನಾವು ಪ್ರತಿನಿತ್ಯ ನಿಸರ್ಗದಲ್ಲಿ ಕಾಣುವ ಹೂವೆ? ಅಲ್ಲ. ಅಂಬಿಕಾತನಯದತ್ತರ ಭಾವದಲ್ಲಿ ಅರಳಿಸಿದ ಹೂ ಇದು. ಇನ್ನೊಂದರಲ್ಲಿ-

''ಬ್ರಹ್ಮನೆ ಸಮಾಧಿಯಲಿ
ಒಲವಿನಲಿ ನಲವಿನಲಿ
ಚೆಲುವಿನಾ ಕಾಣಿಕೆಗೆ ''ಹೂ'' ಎಂದು ಎಂದ.
''ಹೂ'' ಎಂಬ ಮನದುಸಿರೆ
ನೆಲದ ಬಸಿರಲಿ ಮೊಳೆದು
ಮಣ್ಣಿನಾ ಮಾಸದಲಿ ಮಾಸದಲೆ ಬಳೆದು
ನನೆಯಾಗಿ ಮೊನೆಯಾಗಿ
ಮುಗುಳಾಗಿ ಅರಳಾಗಿ
''ಪುಃ ಎಂದು ಬಿಟ್ಟುಸಿರೆ ತಾನೆ ಹೆಸರಾಯ್ತು''

- ಗರಿ : 'ಹೂ'

ಕವಿಯ ತೋಟದಲ್ಲಿ ಹೂ ಹೇಗೆ ಹುಟ್ಟಿತು ಎಂಬುದನ್ನು ತಿಳಿದು ನಲಿಯುತ್ತೇವೆ.

ಅಂಬಿಕಾತನಯದತ್ತರ ಹೂಗಳೆಂದರೆ ಶಬ್ದ; ಮಾಂತ್ರಿಕ ಶಬ್ದ! ಇವರು ಶಬ್ದೋಪಾಸಕರು, ನಾದೋಪಾಸಕರು, ಭಾವೋದ್ದೀಪಕರು. ಹಾಗೆಯೇ ಅಪಾರ ಅರ್ಥ ಸಾಧಕರು. ಒಂದು ಶಬ್ದಕ್ಕಿರುವ ಅನೇಕಾರ್ಥಗಳೆಲ್ಲವನ್ನೂ ಕಾವ್ಯದಲ್ಲಿ ಬಳಸಿ ನೋಡಿದ್ದಾರೆ. ಶಬ್ದಕ್ಕೆ ಹಲವು ಮುಖಗಳುಂಟು, ರೇಖೆಗಳುಂಟು, ಕೋನಗಳುಂಟು ಎನ್ನುತ್ತಾರೆ ಇವರು. ಶಬ್ದಗಳೆಂದರೆ ಸ್ಫಟಿಕವಿದ್ದಂತೆ; ''ಹಳಹಳಕು ಹೀರಕದ ಕಾಂತಿ'' ಎನ್ನುವ ಹಾಗೆ ಶಬ್ದಕ್ಕೆ ಶಕ್ತಿಯುಂಟು, ಸಾಮರ್ಥ್ಯವುಂಟು.

ಅನಾಹತ ನಾದವೇ ಓಂಕಾರ, ಆಹತ ನಾದವೇ ಶಬ್ದಾಕಾರ. ಈ ಓಂಕಾರಕ್ಕೂ ಶಬ್ದಕ್ಕೂ ಹೂವಿಗೂ ನಿಕಟವಾದ ಸಂಬಂಧವಿದೆ. ಅದು ಹೀಗೆ -

''ಮೂರರೊಳಗಿದೆ ಒಂದು, ಕೇಂದ್ರದೊಳು ಬಾಹೊಂದು
ಸಂದು ಬಿಡದಂತೆ ತಲೆ ಹೊಂದಿಕೊಂಡು
ಅಧಮ, ಉತ್ತಮ, ಮಧ್ಯಮವನು ಬೇರ್ಪಡಿಸಿದರು
ಓಂಕಾರ ಮಂಡಲದಿ ಶೂನ್ಯ ಚೆಂಡು''

- ಸೂರ್ಯಪಾನ : 'ಸಂಖ್ಯಾಂಕಿತ'

ಎಂಬುದಾಗಿ ಓಂಕಾರದ ವರ್ಣನೆಯನ್ನು ಕವಿ ಮಾಡಿದ್ದಾನೆ. ಅ, ಉ, ಮ ಕಾರಗಳ ಸಂಗಮವೇ ಓಂಕಾರ. ಈ ಓಂಕಾರದ ಮೌಲ್ಯ - ಮೂರುವರೆ ಮಾತ್ರೆ. ಪ್ರತಿಯೊಬ್ಬ ಮಾನವನ ಶರೀರವೂ ಅವನವನ ಕೈಯಿಂದ ಮೂರುವರೆ ಮೊಳ ಎತ್ತರವಿರುತ್ತದಂತೆ. ಎಂದಮೇಲೆ ಓಂಕಾರದ ಮೌಲ್ಯಕ್ಕೂ, ಮನುಷ್ಯನ ದೇಹದ ಮೌಲ್ಯಕ್ಕೂ ಸಂಬಂಧವಿದೆ. ಅಲ್ಲವೆ? ಇದೇ ಜೀವನಮೌಲ್ಯ! ಓಂಕಾರವೆಂದರೆ ಭಗವಂತ, ಶರೀರಧಾರಿ ಜೀವನೇ ಭಕ್ತ. ಇದು ಎಲ್ಲರೂ ಒಪ್ಪುವಂತಹ ಮಾತು. ಎಂದ ಮಾತ್ರಕ್ಕೆ, ಪ್ರತಿಯೊಬ್ಬ ದೇಹಿಯೂ ಭಕ್ತನೇ ಎಂದರ್ಥವಲ್ಲ. ಈ ಭಕ್ತ ಮತ್ತು ಭಗವಂತ ಕೂಡಿ ಒಂದು ಶರೀರವೇ ಅಥವಾ ಇವು ಬೇರೆ ಬೇರೆ ಶರೀರಗಳೇ? ಇವು, ಎರಡು ಶರೀರಗಳು. ಭಕ್ತಿ ಎಂಬ ಸ್ನೇಹಸೂತ್ರದಿಂದ ಈ ಎರಡೂ ಒಂದಾಗುವುದು ಸಾಧ್ಯ ಎಂಬುದನ್ನು ಅನೇಕ ದಾಸರು, ಶರಣರು, ಸಂತರು ತೋರಿಸಿಕೊಟ್ಟಿದ್ದಾರೆ. ಇದನ್ನೇ ಅಂಬಿಕಾತನಯದತ್ತರು-

''ಎರಡಿಲ್ಲದೊಂದಿಲ್ಲ; ಒಂದಿರದ ಎರಡಿಲ್ಲ;
ಎರಕದಲಿ ಹುಟ್ಟುವುದು ಒಂದೆ ಮೂರ್ತಿ.
ಅವಿಭಕ್ತ ಭಕ್ತಿಯಲಿ ಸಮರಸದ ಶಕ್ತಿಯಲಿ
ಭಕ್ತಭಗವಂತರಿಗೆ ಒಂದೆ ಕೀರ್ತಿ''.

- ಸೂರ್ಯಪಾನ : 'ಸಂಖ್ಯಾಂಕಿತ'

ಎಂದು ದ್ವೈತಾದ್ವೈತಗಳ ಸಾಮರಸ್ಯವನ್ನು ವರ್ಣಿಸಿದ್ದಾರೆ. ಭಕ್ತಿ ಎಂಬ ಈ ಸ್ನೇಹಸೂತ್ರವು ನವೋನವವಾಗಿದೆ. ಅಂಬಿಕಾತನಯದತ್ತರು ಜಪ, ತಪ,

ಧ್ಯಾನಗಳಿಗಿಂತ; ಶಬ್ದೋಪಾಸನೆ ಎಂಬ ಸೂತ್ರವನ್ನೇ ಒಪ್ಪಿಕೊಂಡಂತೆ ತೋರುತ್ತದೆ. ಇವರ ದೃಷ್ಟಿಯಲ್ಲಿ ಶಬ್ದವೆಂದರೆ ನಾದ, ನಾದವೆಂದರೆ ಓಂಕಾರ, ಓಂಕಾರವೆಂದರೆ ಭಗವಂತ - ಹೀಗಿದೆ ಭಗವಂತನ ನೆಲೆ, ಬೆಲೆ ಮತ್ತು ಹರವು.

ಶಬ್ದ ಮಾಡುವವನು ಮನುಷ್ಯ, ಅದನ್ನು ಕೇಳುವವನೂ ಮನುಷ್ಯ. ಆಡಿದ ಶಬ್ದವೇ ಕೇಳಿಸುವುದು, ಕೇಳಿದ ಶಬ್ದದ ಅರ್ಥ ತಟ್ಟನೆ ಹೊಳೆಯುವುದು. ಅರ್ಥದೊಡನೆ ಭಾವ, ರಸ, ಆನಂದ ಇವುಗಳ ಉದ್ಭವವಾಗುವುದು ಹೇಗೆ ಎಂದು ಪ್ರಶ್ನಿಸಿದರೆ, ಉತ್ತರಿಸುವುದು ಸಾಧ್ಯವಿಲ್ಲ. ಇದೆಲ್ಲ ಭಗವಂತನ ಲೀಲೆ, ಗಾರುಡಿ ಎಂದು ಒಪ್ಪಬೇಕಾಗುತ್ತದೆ.

ಈ ಭಗವಂತನ ಪೂಜೆಯನ್ನು ವರಕವಿ ಅಂಬಿಕಾತನಯದತ್ತರು ಶಬ್ದಕುಸುಮಗಳಿಂದ ಮಾಡುತ್ತಾರೆ. ಅಳಿಗಳೆರಗದ, ಗಂಧವಹನಲುಗದ ಅಲರುಗಳೆಂದರೆ - ಕವಿಯ ಶಬ್ದಕುಸುಮಗಳೇ ಎಂದು ತಿಳಿಯಬೇಕು. ಈ ಶಬ್ದಪುಷ್ಪಗಳನ್ನು ತರುವ ಶಕ್ತಿ ಸಾಮರ್ಥ್ಯವು ಎಲ್ಲರಿಗೂ ಇರಲಾರದು. ಅದು ದೈವಾಯತ್ತವಾದ ವರವು. ಶಬ್ದ ಪುಷ್ಪಗಳು ಅರಳುವುದು ನಾದವೆಂಬ ಉದ್ಯಾನದಲ್ಲಿ. ನಾದೋದ್ಯಾನದಲ್ಲಿ ವಿಹರಿಸುವ ಕವಿ ಎಂಬ ತುಂಬಿ, ಶಬ್ದ ಪುಷ್ಪದ ಪರಾಗವನ್ನು, ಮಕರಂದವನ್ನು ಸಂಗ್ರಹಿಸುತ್ತದೆ. ಜೇನ ಹನಿಯನ್ನು ಸವಿದು ಸಾಮಾನ್ಯರು ಆನಂದ ಪಡೆಯುತ್ತಾರೆ.

''ಸೊಲ್ಲು ಎಂಬುದು ನಾದ, ಭಾವದಲ್ಲಿದೆ ಸ್ವಾದ,
ಸ್ವಗತವಿಲ್ಲದ ಮೋದ ಹೊಳಲುಗೊಡದು''.

- ಸೂರ್ಯಪಾನ : 'ಸಂಖ್ಯಾಂಕಿತ'

ಎಂಬ ನುಡಿಯಲ್ಲಿ, ಕವಿ ನಾದವನ್ನು ಸ್ವಗತಮಾಡಿಕೊಂಡಾಗ, ಅದರ ಕಾವು ಕಾಂತಿಯನ್ನು ಪಡೆಯಬಹುದು ಎಂದು ಹೇಳುತ್ತಾರೆ - ಅಂಬಿಕಾತನಯದತ್ತರು.

ಶಬ್ದ ಎಂಬುದು ಹೂ. ಸ್ನೇಹಸೌಹಾರ್ದ ಬೆಳೆಯಬೇಕಾದರೆ, ಶಬ್ದವನ್ನು ಭಾಷೆಯನ್ನು ಬಳಸುವಲ್ಲಿ ಕೌಶಲ್ಯಬೇಕು. ತಪ್ಪಾದ ಭಾಷೆ - ಮನವನ್ನು ಕಹಿಮಾಡುವುದಾದರೆ, ಒಪ್ಪಾದ ಭಾಷೆ - ಸಿಹಿಮಾಡುವುದು, ಅರಳಿಸುವುದು.

ಅರಳಿದ ಮನಗಳು ಸಂವೇದನಶೀಲವಾಗಿ ದನಿ, ಮಾರ್ದನಿಗೊಡುತ್ತವೆ. ಎಂಬ ವಿಚಾರವು,

''ಕೂಹೂಽ ಕೂಹೂಽ ಕೂಹೂಽ
ಮೈತುಂಬ ಮಾವು ಹೂಽ ಹೂಽ
ಒಳಹೊರಗು ಹೂತೆವೇ ನಾವು ನೀವೂ ಕೂಹೂಽ''

– ಸಂಚಯ : 'ಹೂ-ಊಂಹೂ'

ಎಂಬ ಪದ್ಯದಲ್ಲಿ ವ್ಯಕ್ತವಾಗಿದೆ.

ಶಬ್ದ ಶಕ್ತಿಯನ್ನು ಕೊಡುವವನು ಭಗವಂತನಾಗಿದ್ದಾನೆ. ಆತನ ಸ್ಪರ್ಶ ಕವಿಗೆ ಉಂಟಾದಷ್ಟೂ ಉತ್ತಮ. ಅವನ ಸ್ಪರ್ಶಕ್ಕಾಗಿ ಹಾತೊರೆಯಬೇಕು, ಹಾಗೂ ಪ್ರಾರ್ಥಿಸಬೇಕು ಎಂಬುದಾಗಿ, ನಾಕುತಂತಿ – ''ಡೂ'' ಎಂಬ ಪದ್ಯದಲ್ಲಿ ಸೂಚಿಸಿದ್ದಾರೆ. ಅದು ಹೀಗೆ –

''ಹೂಽ ಹೂಽ ಹೂ ಎನ್ನುವ
ಹೂವಿನ ಮುಡಿಯುವನಽ ಕುಡಿಯವನಽ
ಮಾಹೂ, ಬೇಹೂ, ನೀ ಹೂ
ಈ ಹೂ ಅರಳಿಸುವವನಽ
ಮರಳಿಸು ಅವನಽ''

ಕವಿ, ಶಬ್ದ ಮತ್ತು ಅರ್ಥದ ತಿರುಗಣಿಯಲ್ಲಿ ಸಿಕ್ಕಾಗ, ಕಾವ್ಯದ ಉದಯವಾಗುತ್ತದೆ. ಹೀಗೆ ತಿರುಗಣಿಯೊಳಗೆ ಸಿಲುಕಿದ ಕವಿಯ ಚಿತ್ರ ಇಲ್ಲಿದೆ –

''ಮುಂಗಾರ ಹನಿಗೆ ಅರಳಿತ್ತು ಮಣ್ಣೂ
ಹೊಡೆದಾಯ್ತು ನೇಗಿಲಾ
ತಾವರಿ ಹೊಕ್ಕಳಾ
ಹೊಕ್ಕಿತು ಭ್ರಮರಾ
ಇಕ್ಕಿತ್ತು ಬಾಗಿಲಾ''

– ಮುಗಿಲ ಮಲ್ಲಿಗೆ : 'ಮೀನಕೇತು'

ಇಂತಹ ಕವಿಯಿಂದ ಸೃಷ್ಟವಾದ ಕಾವ್ಯ ಅವನ ಮುದ್ದುಕಂದ! ಅದನ್ನು ಅವನು ಕಸವೆಂದು ಬಿಸುಡಲಾರ.

''ಹುಲ್ಲಲ್ಲಾ; ಹೂವು ;
ಕಿತ್ತೆಸೆಯಲ್ಹ್ಯಾಂಗ ?
ಆಗಿದೆ ಇದು ಕಂದಾ.
ಮಾಯೆಯ ಮುಸುಕೋ ?
ಬ್ರಹ್ಮನೇ ಬರದಾ
ಜಗ ಜಗದಾದಂದಾ !''

- ಮುಗಿಲ ಮಲ್ಲಿಗೆ : 'ಮೀನಕೇತು'

ಕಾವ್ಯಶಿಶುವನ್ನು ಮುದ್ದುಗೈಯುತ್ತಾರೆ ಎಂದೇ ಅಂಬಿಕಾತನಯದತ್ತರು ಶಬ್ದೋಪಾಸಕ ಕವಿ - ನಾದೋದ್ಯಾನದಲ್ಲಿ ಕುಳಿತು, ಓಂಕಾರ ಪುರುಷನ ಸ್ಪರ್ಶವನ್ನು ಪಡೆದು, ಕಾವ್ಯಶಿಶುವಿನ ಜನನಕ್ಕೆ ಅನುಕೂಲ ಮಾಡಿಕೊಡುತ್ತಾರೆ. ಹೆರಿಗೆ ಆಗುವವರೆಗೂ ಕವಿ ಬೇನೆಯನ್ನು ತಾಳಿಕೊಳ್ಳಲೇಬೇಕು; ಇದು ಅನಿವಾರ್ಯ. ಕವಿ ತನ್ನ ಕಾವ್ಯನಿರ್ಮಿತಿಯನ್ನು ಕಂಡಾಗ, ಹೆತ್ತ ತಾಯಿ, ಕೂಸನ್ನು ಕಂಡು ಪಡುವ ಆನಂದವನ್ನೇ ಅನುಭವಿಸುತ್ತಾನೆ ಎಂದು ಅಂಬಿಕಾತನಯದತ್ತರು ತಮ್ಮ ''ಹೆರಿಗೆ'' ಎಂಬ ಕವನದಲ್ಲಿ ವರ್ಣಿಸಿದ್ದಾರೆ.

ಅಂಬಿಕಾತನಯದತ್ತ ಕವಿಯ ಮನವನ್ನು ಶಬ್ದ ಕುಸುಮಗಳು -

''ಹಸಿರಲ್ಲಿವೆ, ಕೆಸರಲ್ಲಿವೆ, ಹೆಸರಿಲ್ಲದ ಹೂವು ;
ಉಸಿರಾಡಿಸಿ ಹುಸಿ ಮುಸಿ ನಗೆ ಸೂಸುತ್ತಿವೆ ತಾವು.
ಹಾ ಹಾ ! ಈ ಹೂ ಹೂ ! ಇವೆ ಸರಸಿಯ ಪರಿಸದಲಿ,
ತೋರದ ಕುಣಿವಪ್ಸರೆಯರ ಕಾಣದ ಪರಿಸೆಯಲಿ.
ಗಾಳಿಯ ಅಲೆ ತಲೆದೂಗಿದೆ ಮಿತವಾಗಿದೆ ಸರ್ವ
ಹಾಡುವವೊಲು ಕೇಳಿಸುತಿದೆ ಯಾವನೊ ಗಂಧರ್ವ'' -

- ನಮನ : 'ಹಸಿರಲ್ಲಿವೆ ಕೆಸರಲ್ಲಿವೆ'

ಎಂಬಂತೆ ಆಕರ್ಷಿಸುತ್ತವೆ. ಕವಿ, ಗಂಧರ್ವರನ್ನು ಕಾಣಿಸಿಕೊಂಡು, ಅವರ ಭಾವವನ್ನು ಅರಿತುಕೊಂಡು, ಕವನದಲ್ಲಿ ಅದನ್ನಿಳಿಸಲು ಹವಣಿಸುತ್ತಾನೆ. ಎಂಬ ಭಾವನೆ-

"ಚರಿಸುತ್ತಿದೆ ಗೋಚರಿಸದ ವರದೇಹಿಕ ಭಾವ
ಸ್ಥೂಲಕ್ಕಿಳಿಯಲೆ ಸೂಕ್ಷ್ಮದ ನಸುಕಿನ ಮುಂಜಾವ ?"

-ನಮನ : 'ಹಸಿರಲ್ಲಿವೆ ಕೆಸರಲ್ಲಿವೆ'

ಎಂಬ ಸಾಲುಗಳಲ್ಲಿ ಮೈದಾಳಿದೆ.

ಇದು ಅಂಬಿಕಾತನಯದತ್ತರ ಕವಿಹೃದಯದ ಹೂದೋಟ. ಈ ತೋಟದೊಳಗಿನ ಶಬ್ದಕುಸುಮಗಳನ್ನು ಹಗಲಿರುಳೂ ಆಯುತ್ತ, ಪವಣಿಸುತ್ತ ಮಾಲೆಮಾಡಿ ಓಂಕಾರ ಪುರುಷನಿಗೆ ಬೇಂದ್ರೆ ಅರ್ಪಿಸುತ್ತಾರೆ. ಇದೇ ಅವರ ಉಸಿರಾಟ, ಮಾತಿನ ಗಾರುಡಿ; ಇದೇ ದ.ರಾ. ಬೇಂದ್ರೆಯವರ ದಿನದಿನದ ಜೀವನ !

‘‘ಅಂಬಿಕಾತನಯ ಹಾಡಿದನೆಂದರೆ ಹೂವುಗಳರಳುವವು’’ ಎಂಬ ಈ ಸಂಕಲನವು, ಮೂಲತಃ ಮುನಾಗಿ ವರಕವಿ ಡಾ|| ದ. ರಾ. ಬೇಂದ್ರೆಯವರು ‘ಹೂ’ ಕುರಿತು ರಚಿಸಿದ ಕವನಗಳಲ್ಲಿ ೧೬ನ್ನು ಮಾತ್ರ ಆಯ್ದುಕೊಂಡು ಅವುಗಳಿಗೆ ಶಾಸ್ತ್ರೀಯ ಸಂಗೀತರೀತ್ಯಾ ಸ್ವರ ಸಂಯೋಜನೆಯನ್ನು ಒದಗಿಸಲು ಸಿದ್ಧಪಡಿಸಿ ಪ್ರಕಟಿಸಲಾಗುತ್ತಿರುವ ಕೃತಿ. ಈ ಕೃತಿಯ ಭಾಗ-೧ರಲ್ಲಿ ಈ ಹದಿನಾರು ಕವನಗಳ ಪೂರ್ಣಪಾಠವನ್ನು ನೀಡಲಾಗಿದೆ.

– ಸಂ.

# ೧ ಹೂ

೧
ಚಂದಿರನ ಮೂಡಿಸಲು
ಮನದಲ್ಲಿ ನೆನೆಯುತಿರೆ
ಮೊಳೆತ ಚೆಂದದ ನನೆಯ, ಮುಂಗುರಹ ಪಡೆದ ॥
ಬ್ರಹ್ಮನೆ ಸಮಾಧಿಯಲಿ
ಒಲವಿನಲಿ ನಲಿವಿನಲಿ
ಚೆಲುವಿನಾ ಕಾಣಿಕೆಗೆ 'ಹೂ' ಎಂದು, ಎಂದ
೨
ಆ ಚೆಲುವನಾ ಒಲವ-
ನಾ ನಲಿವನೆಲ್ಲೆಲ್ಲು
ಕಣ್ಣಾರೆ ಮನವಾರಲೆಂದು ಹೊರ ಹಡೆದ ॥
'ಹೂ' ಎಂಬ ಮನದುಸಿರೆ
ನೆಲದ ಬಸಿರಲಿ ಮೊಳೆದು
ಮಣ್ಣಿನಾ ಮಾಸದಲಿ ಮಾಸದಲೆ ಬಳೆದು
೩
ತಂಗಾಳಿಯೊಡ ಬಂದ
ಮುಂಗಾರ ಮಳೆಗೆದ್ದು
ಗಿಡಬಳ್ಳಿಗಳ ಕೊನೆಗೆ ರೂಪವನು ತಳೆದು ॥
ನನೆಯಾಗಿ ಮೊನೆಯಾಗಿ
ಮುಗುಳಾಗಿ ಅರಳಾಗಿ
'ಪುಃ' ಎಂದು ಬಿಟ್ಟುಸಿರೆ ತಾನೆ ಹೆಸರಾಯ್ತು
೪
ಒಂದರೊಲು ಒಂದಿಲ್ಲ
ಒಂದರೊಳು ಕುಂದಿಲ್ಲ
ಒಂದೊಂದು ಅಂದವೂ ತನತನಗೆ ಚೆಂದ ॥
ಚೆಂದಕ್ಕೆ ಒಂದೆಮ್ಮೆ
ಸಾಲದೆಂಬಂತೆ ನೂ-
ರೊಂದು ಮೈದಾಳಿ ಕುಣಿಯುವದು ಸ್ವಚ್ಛಂದ

೫

ಹೂವೆ ಚಂದಕೆ  ಅರಸ
ಚೆಂದದೊಳು ಇದು ಸರಸ
ಇದುವೆ ಚೆಂದದ ಗುಡಿಯು ಗೋಪುರಕೆ ಕಳಸ ॥
ಇದುವೆ ಚೆಂದದ ಕುಸುರು
ನರುಗಂಪು ಇದರುಸಿರು
ಇದಕೆ 'ಹೂ' ಎಂಬ ಹಗುರಾದ ಸವಿ ಹೆಸರು.

- ಗರಿ : ೩೫/ಪ್ರ : ೧೯೩೨

---

ಭಾವ : ಹೂ ಎಂಬ ಶಬ್ದಾರ್ಥದಲ್ಲಿ ಹುದುಗಿದ ಭಾವವನ್ನು ಕಲ್ಪನಾವಲ್ಲರಿಯಾಗಿ ಇಲ್ಲಿ ಹಬ್ಬಿಸಿದೆ.

ವಿಶೇಷ : ಕವನದ ಛಂದಸ್ಸು-ಕುಸುಮ ಷಟ್ಪದಿ. ೩ನೇ ಸಾಲಿನ ಕೊನೆಯ ಗಣ ೨ ಮಾತ್ರೆಯದಿರಬೇಕು. ಬೇಂದ್ರೆಯವರು ಅದನ್ನು ೨+೧=೩ ಮಾತ್ರೆಯನ್ನಾಗಿ ಮಾರ್ಪಡಿಸುವ ಸ್ವಾತಂತ್ರ್ಯ ತೋರಿಸಿದ್ದಾರೆ. ರಚನೆ ಗೇಯವಾಗಿದೆ.



# ೨ ಪಾತರಗಿತ್ತಿ ಪಕ್ಕ

ಪಾತರಗಿತ್ತೀ ಪಕ್ಕಾ
ನೋಡೀದೇನಽ ಅಕ್ಕಾ! ॥ ಪಲ್ಲವಿ ॥

೧
ಹಸಿರು ಹಚ್ಚಿ ಚುಚ್ಚಿ
ಮೇಲಽಕರಿಸಿಣ ಹಚ್ಚಿ,

೨
ಹೊನ್ನ ಚಿಕ್ಕಿ ಚಿಕ್ಕಿ
ಇಟ್ಟು ಬೆಳ್ಳೀ ಅಕ್ಕಿ,

೩
ಸುತ್ತೂ ಕುಂಕುಮದೆಳಿ
ಎಳೆದು ಕಾಡಿಗೆ ಸುಳಿ,

೪
ಗಾಳೀ ಕೆನೀಲೇನಽ
ಮಾಡಿದ್ದಾರ ತಾನ!

೫
ನೂರು ಆರು ಪಾರು
ಯಾರು ಮಾಡಿದ್ದಾರು!

೬
ಏನು ಬಣ್ಣ ಬಣ್ಣ
ನಡುವೆ ನವಿಲಗಣ್ಣ!

೭
ರೇಶಿಮೆ ಪಕ್ಕ ನಯ
ಮುಟ್ಟಲಾರೆ ಭಯ!

೮
ಹೂವಿನ ಪಕಳಿಗಿಂತ
ತಿಳಿವು ತಿಳಿವು ಅಂತ?

೯
ಹೂವಿಗೆ ಹೋಗಿ ತಾವ
ಗಲ್ಲಾ ತಿವಿತಾವ.

೧೦
ಬನ ಬನದಾಗ ಆಡಿ
ಪಕ್ಕಾ ಹುಡಿ ಹುಡಿ;





೧೧
ಹುಲ್ಲುಗಾವುಲದಾಗ
ಹಳ್ಳೀಹುಡುಗೀ ಹಾಂಗ-
೧೨
ಹುಡದೀ ಹುಡದೀ ಭಾಳ
ಆಟಕಿಲ್ಲ ತಾಳ.
೧೩
ಕಿರೇ ಸೂರೇ ಪಾನ-
ದಲ್ಲಿ ಧೂಳಿ ಸ್ನಾನ.
೧೪
ತುರುಬಿ ತುಂಬಿ ತೋಟ-
ದಲ್ಲಿ ದಿನದ ಊಟ.
೧೫
ಕಳ್ಳಿ ಹೂವ ಕಡಿದು
ಹೂತುಟನೀರ ಕುಡಿದು;
೧೬
ನಾಯಿಊ ಛತ್ತರಿಗ್ಯಾಗ
ಕೂತು ಮೋಜಿನ್ಯಾಗ,
೧೭
ರುದ್ರಗಂಟಿ ಮೂಸಿ
ವಿಷ್ಣುಗಂಟಿ ಹಾಸಿ,
೧೮
ಹೇಸಿಗೆ ಹೂವ ಬಳಿಗೆ
ಹೋಗಿ ಒಂದಽಗಳಿಗೆ,
೧೯
ಮುದಗುಣಿಕಿಯ ಮುದ್ದು
ಹುರುಪಿಗಿಷ್ಟು ಮೆದ್ದು,
೨೦
ಕಾಡ ಗಿಡ ಗಂಟಿ
ಅಂಚಿಗಂಟಿ ಗಿಂಟಿ,
೨೧
ಸೀಗಿ ಬಳ್ಳಿ ತಾಗಿ
ಪಕ್ಕ ಬೆಳ್ಳಗಾಗಿ,



೨೨
ಗೊರಟಿಗೆಗೆ ಶರಣ
ಮಾಡಿ ದೂರಿಂದಽನ,
೨೩
ಮಾಲಿಂಗನ ಬಳ್ಳಿ
ತೂಗೂ ಮಂಚದಲ್ಲಿ,
೨೪
ತೂಗಿ ತೂಗಿ ತೂಗಿ
ದಣಿಧಾಂಗ ಆಗಿ,
೨೫
ಬೇಲೀ ಬಳ್ಳಿಯೊಳಗ
ಅದರ ನೆರಳ ತೆಳಗ
೨೬
ನಿದ್ದಿಗುಳ್ಯಾಡಿ
ಪಗಡಿ ಪಕ್ಕಾ ಅಡಿ,
೨೭
ಗುಲಬಾಕ್ಷಿಯ ಹೂವ
ಕುಶಲ ಕೇಳತಾವ;
೨೮
ಹುಡಿಯ ನೀರಿನ್ಯಾಗ
ತುಳುಕಿಸುತ್ತ ಬ್ಯಾಗ
೨೯
ಹಡಿಯೆ ಬೀಜ ಗಂಡು
ಹಾರ ಹರಿಕಿ ಅಂದು,
೩೦
ಅಡವಿ ಮಲ್ಲಿಗಿ ಕಂಡು
ಅದರ ಕಂಪನುಂಡು,
೩೧
ಹುಲ್ಲ ಹೊಲಕ ಬಂದು
ಗುಬ್ಬಿ ಬೆಳಸಿ ತಿಂದು,
೩೨
ಇಷ್ಟು ಎಲ್ಲಾ ಮಾಡಿ
ಸಪ್ಪಳಿಲ್ಲದಾಡಿ,

೩೩
ತಾಳ ಚವ್ವ ಚಕ್ಕ
ಕುಣಿತ ತಕ್ಕ ತಕ್ಕ;
೩೪
ಆಸಿ ಹಚ್ಚಿ ಹ್ಯಾಂಗ
ಕಂಡು ಸಿಕ್ಕಧಾಂಗ
೩೫
ಸಿಕ್ಕಲ್ಲೊಲ್ಲೇಡತಾವ
ಅಲ್ಲ್ಯೊ ಇಲ್ಲ್ಯೊ ಅವs.
೩೬
ಕಾಣದೆಲ್ಲೋ ಮೂಡಿ
ಬಂದು ಗಾಳಿ ಗೂಡಿ,
೩೭
ಇನ್ನು ಎಲ್ಲಿಗೋಟ?
ನಂದನದ ತೋಟ!

- ಗರಿ : ೪೩/ರಚನೆ : ೧೯೩೧, ಮೇ/ಪ್ರ : ೧೯೩೨

---

ಭಾವ : ಮುಂಜಾವಿನಿಂದ ಸಂಜೆಯವರೆಗೆ ನಿರಂತರ ಚಾಂಚಲ್ಯದಲ್ಲಿ ಎಂಬಂತೆ ಬಾಳ ಬೆಳಗಿಸುವ ಪಾತರಗಿತ್ತಿ-ಚಿಟ್ಟೆಯ-ಜೀವನದ ವಿಸ್ಮಯವನ್ನು ಚೆಲುವನ್ನು ಇಲ್ಲಿ ಮೂಡಿಸಿದೆ.

ಶಬ್ದಾರ್ಥ : ಹುಡಿ=ಹೂ ಧೂಳಿ. ಹುಡದಿ=ಕಬಡ್ಡಿ, ಗದ್ದಲ. ಕೀರೇ=ಕಿರಿದಾದ.



# ೩ ಶ್ರಾವಣದ ವೈಭವ

ಏನು ಹಸಿರು! ಏನು ಹಳದಿ
ಸುತ್ತುಮುತ್ತು ನೋಡು ಕೆಳದಿ! ॥ ಪಲ್ಲವಿ ॥

**ಚಿಂದು :**

೧
ಹುಲ್ಲು ಹೂವು ಆದರೇನು,
ಹಬ್ಬದುಬ್ಬಿನಲ್ಲಿವೆ;
ದಿಬ್ಬಗಳನು ತಬ್ಬಲೆಂದು
ಎಲ್ಲ ನೆಲಕು ಹಬ್ಬಿವೆ.

೨
ಮಳೆಯ ಬಿಲ್ಲು ಮುರಿದು ಹತ್ತು-
ಕಡೆಗೆ ಹಂಚಿದಂತಿದೆ,
ಹುಲ್ಲು ಕಸವು ಬಣ್ಣ ಬಡೆದು
ಹೂತು ಹಿಗ್ಗಿ ನಿಂತಿದೆ.



೩
ನೆಲದ ಬಸಿರ ರತ್ನರತ್ನ
ತನ್ನ ಸೊಬಗ ಕಳಿಸಿದೆ;
ಬಣ್ಣದೊಂದು ಜಾತ್ರೆಗಾಗಿ
ತನ್ನ ಪಯಣ ಬೆಳೆಸಿದೆ.

೪
ಮಣ್ಣು ಹುಡಿಯ ಕಣಕಣವೂ
ಕಣ್ಣು ಪಡೆದ ಹಾಗಿದೆ;
ಬಾನಿನಂಚಿನಲ್ಲಿ ಮೋಡ
ನೋಡಲಿದನೆ ಬಾಗಿದೆ.

೫
ಮುಗಿಲು ನೆಲಕೆ ಮುಕ್ಕು ಚಿಕ್ಕೆ
ಕಾಳುಗಳನು ಬಿತ್ತಿದೆ;
ನೆಲವು ಮುಗಿಲಿಗರ್ತಿಯಿಂದ
ಆರತಿಯನ್ನೆತ್ತಿದೆ.

೬
ಬಸಿರೆ ಹೊಲಕೆ ಹೂವು ಮುಡಿಸ-
ಲೆಂದು ಬಂದ ಸಂಭ್ರಮು;
ಸೃಷ್ಟಿಯಲ್ಲೆ ಕಾಣುತಿಹುದು
ಮುನುಜನೆತ್ತಿದೀ ಕ್ರಮು.



**ಎರಡು -:**

೧
ರಂಗು ಇಹುದು, ರೂಪವಿಹುದು,
ಗಂಧ ಒಳ್ಳಿತಿಲ್ಲವು;
ನಯವು, ನುಣುಪು, ಇದ್ದು ಏನು?
ವ್ಯರ್ಥವಾಯಿತೆಲ್ಲವು!

೨
ಚದುರು ಹೂ ಲವಂಗ ಮತ್ತೆ
ಇದಕೆ ಹೆಸರು ಹೇಸಿಗೆ;
ಹೆಸರು ಪಡೆದ ಹೂವೆ ನಿನಗೆ
ಇಲ್ಲ ಮಳೆಯು ಬೇಸಿಗೆ.

೩
ರಂಗವಲ್ಲಿ ಹಸೆಯ ಹಾಗೆ
ಏನು ರಂಗು ರಂಗಿದೆ!
ಗುತ್ತನಾಗಿ ಒತ್ತಿ ಬೆಳೆದು
ತಂಗಿದಲ್ಲಿ ತಂಗಿದೆ!

೪
ಡೊಂಕು ಇಲ್ಲ, ಬಿಂಕವಿಲ್ಲ,
ಮುರಕ ಮಾಟವಿಲ್ಲದೆ,
ಹೊಲದ ಹೂವು ನೆಲದ ಹಾಗೆ
ನಿಂತ ಕಡೆಗೆ ನಿಲ್ಲದೆ?

೫
ಗಾಳಿ ಬೀಸಿ ಹಾಸಿ ಹೋಗಿ
ಗಾಸಿ ಮಾಡಬಂದರು
ವಾಸಿಯಾಯಿತೆಂಬುವಂತೆ
ಇಹುದು ನೋಡು ನೊಂದರು.

**ಮೂರು :**

೧
ಹುಡಿಯು ಅರಳಿ ಹೂವು ಆಗೆ,
ಹುಳಕೆ ರೆಕ್ಕೆ ಒಡೆದವು;
ಮುಸುಕು ಹರಿದು ಪಕ್ಕ ತೆರೆದು
ಚಿಟ್ಟೆ ಮುಕ್ತಿ ಪಡೆದವು.

೨
ಮುಕ್ತಿ ಪಡೆದ ಹರ್ಷವೆನಲೊ!
ಸೆರೆಯ ಬಿಟ್ಟ ಹುಚ್ಚಿದು,
ಏನು ಆದರೇನು ಇಹುದು
ಅಚ್ಚ ಅಚ್ಚುಮೆಚ್ಚಿದು.

೩
ಪಾತ್ರದವಳು ನೂರು ನಾಟ್ಯ
ಆಡುವಂತೆ ಆಡುವ-
ಹುಡುಗನಂತೆ ಹುಡುಗಿಯಂತೆ
ಸಿಕ್ಕಕಡೆಗೆ ಓಡುವ-

೪
ನಯವೆ ರೆಕ್ಕೆ ಪಡೆದು ಚೆಲ್ಲ-
ವರಿದು ಪಾರುತಿರುವದು;
ಹುಚ್ಚುಹಿಗ್ಗಿಗೆಗ್ಗು ಇಲ್ಲ
ಎಂದು ಸಾರುತಿರುವದು.

೫
ರೆಕ್ಕೆಹುಳಗಳಲ್ಲ ಇವೂ
ಚಿಕ್ಕ ರೂಪ ತಾಳಿದ
ಚೊಕ್ಕ ಅಪ್ಸರಸಿಯರೇ
ನಕ್ಕು ನಲಿಯುತಿರುವರು.

೬
'ಇಂದ್ರಜಾಲದಿಂದ ಬಂದ
ಸುಂದರಿಯರು' ಎಂಬುದು
ಊಹೆ ಕೂಡ ಊಹಿಸಿಯೂ
ತನ್ನ ತಾನೆ ನಂಬದು;



೭
ಒಂದನೊಂದು ಅಟ್ಟುತಿಹವು
ಒಂದನೊಂದು ಮುಟ್ಟಲು,
ಅಲ್ಲಿ ಇಲ್ಲಿ ಎಲ್ಲಿ ಚಿಟ್ಟೆ
ಸಾಲು ಸಾಲು ಮೆಟ್ಟಲು.
೮
ಪ್ರಣಯಭಂಗ ಪಂಕ್ತಿ ಪಂಕ್ತಿ
ಸ್ವರ್ಗಸೋಪಾನವು !
ಎದೆಯಲಿದ್ದ ತನನ ತಾನ
ಮೌನವೆತ್ತ ಗಾನವು !
೯
ಹೂವು ಪಕಳೆ ಪ್ರಾಣ ತುಂಬಿ
ಚಿಟ್ಟೆಯಾಗಿ ಕಾಂಬವೊ !
ಕುಣಿದು ದಣಿದ ಚಿಟ್ಟೆ-ಪಕ್ಕ
ಹೂವು ಎನಿಸಿಕೊಂಬವೋ !
೧೦
ಒಂದನೊಂದು ತಬ್ಬಿ ಮುತ್ತಿ
ಏಕಜೀವವಾಗಿವೆ.
ಜಡವು ಜೀವವೆಂದು ಸುಳ್ಳೆ
ಎರಡು ರೂಪವಾಗಿವೆ.
೧೧
ಎಂಟು ಹತ್ತು ಗುಂಪು ಗುಂಪು
ಒಂದನೊಂದು ಬಳಸುತ
ಒಂದನೊಂದು ಎಳೆದು ಎಳಸಿ
ಹಿಂದೆ ಮುಂದೆ ಕಳಿಸುತ
೧೨
ಚಿಟ್ಟೆದುಂಬಿ ಒಟ್ಟಿಲಾಗಿ
ದೊಂಬಿಯಾಡುತಿರುವವು;
ಗೊಂಬಿ ಬರೆದ ಹಾಗೆ ಹೂವು
ಅದನು ನೋಡುತಿರುವವು.

## ನಾಕು *

೧

ಹಾಳು ಬೀಳು ಪಡವು ಬಂಜೆ
ಹಕ್ಕಲೊಕ್ಕಲೆಲ್ಲವೂ
ವ್ಯಾಪ್ತವಾಯ್ತು ಹೂವ ಹೂವ
ರಾಸಲೀಲೆಗೆಲ್ಲವೂ.

೨

ಹೂವ ಹಡಲಿಗೆಯನು ಹೊತ್ತ
ಭೂಮಿತಾಯಿ ಜೋಗಿತಿ,
ಮೈತುಂಬಿ ಕುಣಿಯುತಿಹಳ-
ನಂತಕಾಲವೀಗತಿ.

೩

ಎಷ್ಟು ಹೋಲಿಕೆಯನು ಕೊಟ್ಟು
ಹೊಗಳಿ ಮನವು ತಣಿಯದು;
ರೂಪಗಳಿಗೆ ಚಿತ್ರಗಳಿಗೆ
ಉಪಮೆಗಳಿಗೆ ಗಣಿಯದು.

- ಸಖೀಗೀತ : ೧೯/ರಚನೆ : ೧೯೩೨/ಪ್ರ : ೧೯೩೭

---

ಭಾವ : ಶ್ರಾವಣದಲ್ಲಿಯ ನಿಸರ್ಗ ವೈಭವವನ್ನು ಇಲ್ಲಿ ಕಾಣಬಹುದು.



# ೪ ಪಾರಿಜಾತ

೧
ಸಂಜೆಗೆಂಪು ಮೊದಲು ಹಿಂದೆ
ಬೆಳುದಿಂಗಳು ಅದರ ಮುಂದೆ
ವರ್ಣಕ್ರಮ ಕಾಣಲಮಮ
ಇದನು ಬ್ರಹ್ಮ ಬರೆದನೊ!
೨
ತುಂಬು ಹಳದಿ ಕೆಂಪು ನಸುಕೊ
ಹೂವದು ಮುಂಜಾವ ಮಸುಕೊ
ಎನಿತು ಸಣ್ಣ ಏನು ಬಣ್ಣ
ನನ್ನ ಕಣ್ಣ ಕರೆಸಿತು.
೩
ಹೊಳೆವ ಹುರುಳ ಹಾಡಿನಂತೆ
ಹೆಣ್ಣಿನ ಕಳೆ ಪಾಡಿನಂತೆ-
ಈ ಸುವಾಸ, ಮಂದಹಾಸ
ದಿನದಾಯಸ ಕಳೆವುದು.
೪
ಮೂಗಿಗಿದರ ಕಂಪು ಬರದು
ಮೈಗೆ ಇದರ ತಂಪು ಅರಿದು
ಸುರರ ಬನದ ಹೂವುತನದ
ತಿಳಲು, ಮನದ ಅರಿವಿದು.
೫
ಸತಿ ರುಕ್ಮಿಣಿ ಪ್ರೇಮರಮಣ
ಅವಳ ಪೂಜೆಗಿದೆ ಸುಮಮಣಿ
ಕಾಮಭಾವ ತೊಳೆದು ದೇವ
ಈ ಹೂವ ತರಿಸಿದ.
೬
ಸತ್ಯಭಾಮೆ ಕುನಿಸಿನವಳು,
ಕೃಷ್ಣ, ರಸಿಕ , ಹುಡುಗೆಯಿವಳು
ಇದನು ಒಂದು ಮೇಲು ಎಂದು
ಭಜಿಸಲೆಂದು ಇರಿಸಿದ.

೭
ಮಣ್ಣು ನೆಲದ ಹೂವೆ ಅಲ್ಲ
ಗರ್ವ ದರ್ಪ ಇದಕೆ ಇಲ್ಲ;
ತೊರೆದಾದಿನ ನಂದನವನ
ಭೂ ಬಂಧನ ಪಡೆಯಿತು.
೮
ಗಿಡವು ಬರಲು ಇಳೆಗೆ ಇಳಿದು
ಭುವಿಗೆ ಸರಿ ವಿಕಾರ ತಳೆದು
ಸುಮವು ಮಾತ್ರ ಮಧುರಗಾತ್ರ
ಪ್ರೀತಿ ಪಾತ್ರವುಳಿದಿತು.
೯
ಎಲೆಯು ಗಿಡವು ತೀರ ರುಕ್ಷ
ಹೆಸರು ಹಿರಿದು ಕಲ್ಪವೃಕ್ಷ
ಹೂವಿನಿಂದ ಹೆಸರು ಬಂದ
ಇದರ ಚಂದ ಹೊಸತಿದು.
೧೦
ಚಿಕ್ಕೆಯೊಡನೆ ಮೂಡು ಮುಳುಗು;
ಆಗದದಕೆ ಹಗಲ ಬೆಳಗು;
ಜ್ಞಾನಿಯ ಗತಿ ಇರುಳೊಳಗತಿ
ನಿಜ ಜಾಗೃತಿ ಇರುವದು.
೧೧
ಬಲು ಮಿದು ಅತಿ ನಯದ ತನುವು
ಮುಟ್ಟಿದೊಡನೆ ಕೆಟ್ಟೆನೆನುವು-
ದಿದು ಸತಿ ಭಯ, ಮಡದಿಯ ನಯ
ಅಂಥ ಹೃದಯವರಳಿತು.

೧೨
ಪಾರಿಜಾತ ಹುಟ್ಟಿಸಿದನ
ಎದೆಯ ಹದವು, ಮನದ ಹದನ
ಏನು ಮಾಟ, ಎಂಥ ಆಟ !
ಇದರ ಕೂಟ ತಿಳಿಯದು.

- ನಾದಲೀಲೆ : ೧೫/ರಚನೆ : ಸಾಧನಕೇರಿ, ಧಾರವಾಡ/ಪ್ರ : ೧೯೩೮

---

ಭಾವ : ನಂದನವನದಲ್ಲಿದ್ದ ಈ ಕಲ್ಪವೃಕ್ಷ ಸತ್ಯಭಾಮೆಯ ಭೂ ಅಂಗಳಕ್ಕೆ ಮೊದಲು ಬಂತಂತೆ. ಆದರೆ ಅದರ ಹೂವಿನ ಮಳೆಯೆಲ್ಲ ರುಕ್ಮಿಣಿಯ ಅಂಗಳದಲ್ಲಿ ಬಿತ್ತಂತೆ. ಪಾರಿಜಾತ ಹೂ ಸಮುದ್ರ ಮಂಥನದಲ್ಲಿ ಬಂದ ಚತುರ್ದಶ ರತ್ನಗಳಲ್ಲೊಂದಂತೆ. ಅಡಗಿರುವ ಇತಿಹಾಸ ಯಾವುದೇ ಇರಲಿ, ಈ ಹೂವು ಪ್ರಜ್ಞೆಗೆ ನವನವೋನ್ಮೇಷವನ್ನು ತರುವುದು. ದಿವ್ಯಜೀವನದ ಅಭೀಪ್ಸೆಯ ಕರುಹು ಈ ಹೂವು ಎಂದು ಒಳಗಂಡವರು - ಪಾಂಡಿಚೇರಿಯ ಶ್ರೀಮಾತೆಯವರು.

ಶಬ್ದಾರ್ಥ : ಕುನಿಸು-ಕುನಸು=ಸೇಡು, ಬದ್ಧದ್ವೇಷ. ರುಕ್ಷ=ಒರಟಾದ, ಬಿರುಸಾದ. ಗೊಂದಳ=ಸಮೂಹ.

ವಿಶೇಷ : ಇಂದಿಗೂ ದ. ರಾ. ಬೇಂದ್ರೆಯವರ ಸಾಧನಕೇರಿಯ ಮನೆಯ ಅಂಗಳ ಪ್ರವೇಶಿಸುತ್ತಲೇ ಬಲಗಡೆಗೆ ಪಾರಿಜಾತ ವೃಕ್ಷವಿದೆ. ಇದು ಕವನಕ್ಕೆ ಪ್ರೇರಣೆ.



# ೫ ವನಸುಮ

೧
ಹೆಸರಿಲ್ಲದಿಲ್ಲಿ ಎಸೆಯುವದು ಹೂವಿನ ಪಸರ.
ಮರ ಮರದ ಮೆರೆದಾಟವಿರಲಿ ಸುತ್ತ;
ಪಶುಗಳಾರ್ಭಟೆ, ಮೃಗದ ಎಡೆಯಾಟ, ಹುಳಹುಪ್ಪ-
ಡಿಯ ಕಾಟ ನಡೆದಿರಲಿ ನೋಡಿದತ್ತ.
೨
ನೋಡುವರು, ನೋಡಿ ನಲಿದಾಡುವರು ಕೊಂಡು ಕೊನೆ-
ದಾಡುವರು ಇಲ್ಲದಿರೆ ಏನು ಕೊರತೆ?
ಬೆಟ್ಟದೆದೆಯನು ಬಿರಿದು ಬಾಳಹಿಗ್ಗಿನ ಬುಗ್ಗೆ
ಉಗ್ಗಿ ಬಹದದು; ಅಲ್ಲ-ಮಳಲಿನೊರತೆ.
೩
ಮೂರು ದಿನಗಳ ಸಂತೆ ಮುಗಿಸ ಬಂದವನು
ಹುಟ್ಟು ಕಂತಿನ ಹುಟ್ಟಬಲ್ಲನೇನು?
ಗಂಧಬಾಂಧವನು ಸ್ವಚ್ಛಂದಮಾರುತನು
ಈ ಸೌಸವವ ಮೂಸಿ ಉಸಿರಾಡಿಸುವನು.

- ಉಯ್ಯಾಲೆ : ೫೧/ಪ್ರ : ೧೯೩೮

---

ಭಾವ : ವನಸುಮಕ್ಕೂ, ಗಂಧಬಾಂಧವ ವಾಯುವಿಗೂ ಇರುವ ನಂಟು. ನಿಸರ್ಗ ಹಾಗೂ ಪ್ರೇಕ್ಷಕ ಸಂಬಂಧಕ್ಕೆ ಇದು ಮಾರ್ಗದರ್ಶಕವಾಗಿದೆ.

ಶಬ್ದಾರ್ಥ : ಸೌಸವ=ಪರಿಮಳ, ಸುವಾಸನೆ.



# ೬ ಸುಖ-ದುಃಖ

೧
ಚುಮು ಚುಮು ನಸುಕಿನಲಿ
ಹೂವುಗಳರಳುವವು ;
ಅಂದವ ತೋರಿ ಸುಗಂಧವ ಬೀರಿ
ಸಂಜೆಗೆ ತೆರಳುವವು.

೨
ಅದೆ ಹೊಸ ಹರೆಯದಲಿ
ಆಸೆಯು ಮೊಳೆಯುವದು
ಹೂತು ಕಾತು ಹಣ್ಣಾತು ಬೀತು
ಮುಪ್ಪಿನಲಳಿಯುವದು

೩
ಗಾಳಿಯ ಗತಿಯಲ್ಲಿ
ದುಃಖದ ಸುಳಿವಿಲ್ಲ
ಚಿಕ್ಕಮಕ್ಕಳೂ ನಕ್ಕನಗೆಯಲ್ಲೂ
ಸುಖಕೂ ಅಳಿವಿಲ್ಲ.

- ಉಯ್ಯಾಲೆ : ೬೪/ಪ್ರ : ೧೯೩೮

---

ಭಾವ : ಹೂವುಗಳ ಜೀವನ ಹಾಗೂ ಮಾನವನ ಸುಖದುಃಖ ಇವುಗಳಲ್ಲಿ ಇರುವ ಸಾಮ್ಯಗಳ ಚಿಂತನ.

ಶಬ್ದಾರ್ಥ : ಕಾತು=ಕಾಯಿಯಾಗು. ಬೀತು=ಮುಗಿದು, ತೀರಿ.

# ೭ ಮಲ್ಲಿಗೆ

ಆ, ಹಾ, ಹಾ, ಮಲ್ಲಿಗೆ
ಬರುವೆನೆ ನಿನ್ನಲ್ಲಿಗೆ ॥ ಪಲ್ಲವಿ ॥

೧

"ಚುಕ್ಕಿ ಹೊಳಪು ಬೆಳಗಿದಾಗ
ಬೆಳಗು ಬೆಳ್ಳಿ ತೊಳಗಿದಾಗ
ತಿಂಗಳಿನ್ನೂ ಮುಳುಗದಾಗ
ಬರುವೆನೆ ನಿನ್ನಲ್ಲಿಗೆ
ಹೇ ಸುಗಂಧ-ಗಂಧ-ಮೋಹನೇ
ಏ ಮಂದಪವನವಾಹನೇ
ಹಾ ತಲುಪಿದ ಆವಾಹನೇ
ಆ, ಹಾ, ಹಾ, ಮಲ್ಲಿಗೆ"

೨

ನಸುಕು ಸುಸಿಲ ಸಮಯವಾಗೆ
ಸೌಸವವದು ಸೂಸಿ ತಾಗೆ
ಕಾಣದೆ ಅದು ಬರುವ ಹಾಗೆ
ಬರುವೆನೆ ನಿನ್ನಲ್ಲಿಗೆ
ಹೇ ಚೂತಾಂಕುರ ಚಾಮರೇ
ಏನಿನ್ನಿದಿರೇ ತಾಮರೇ
ಹಾ ಬೇರೆ ಸೋಮ-ಕಾಮರೇ
ಆ, ಹಾ, ಹಾ, ಮಲ್ಲಿಗೆ.

೩

ಸವಿಗನಸಿನ ಕಾಲದಲ್ಲಿ
ಉಷೆ ಕುಣಿಯುವ ತಾಲದಲ್ಲಿ
ನಿನ್ನ ಮೋಹಜಾಲದಲ್ಲಿ
ಬರುವೆನೆ ನಿನ್ನಲ್ಲಿಗೆ.
ಹೇ ಕೋಕಿಲ-ನುತಿ-ಗಾಯನೇ
ಏ ಬಾನ ಬಾಯಿ 'ಆ' ಎನೇ
ಹಾ ಗಾಳಿಗೊಳಲು 'ಹೋ' ಎನೇ
ಆ,ಹಾ,ಹಾ, ಮಲ್ಲಿಗೆ.

೪

'ಮೂಗಾಳಿಯ ಮೂಗುದಾರ
ಎಳೆವುದು ಹೇ ಮಧುಪ ಬಾರ
ಮಧುಚುಂಬನ ಬೇಗ ತಾರ'
ಹಾಡುವದೀ ಗಾಳೀ
ಒಲವಿನ ಹೊಸ ಕಾಳೀ
ಕವಿಯ ರೂಪ ತಾಳಿ
ಆ, ಹಾ, ಹಾ, ಮಲ್ಲಿಗೆ

- ಗಂಗಾವತರಣ : ೩೮/ಪ್ರ : ೧೯೫೧

---

ಭಾವ : ಬೆಳದಿಂಗಳ ರಾತ್ರಿಯಲ್ಲಿ ಅಚ್ಚ ಬಿಳಿ ಮಲ್ಲಿಗೆ ಹೂವಿನ ಸುಂದರ ವರ್ಣನೆ. ೪ನೆ ನುಡಿಯಲ್ಲಿ ಬರುವ 'ಮಧುಚಂಬನ ಬೇಗ ತಾರ' ಎಂಬ ಸಾಲು ಮಲ್ಲಿಗೆ ಹೂವಿನ ಅತ್ಯಂತ ಮಧುರವಾದ ಸುವಾಸನೆಗೆ ಮನಸೋತು ಆ ಸುವಾಸನೆಯನ್ನು ಕವಿ ವರ್ಣಿಸಿದ ರೀತಿ ಅನನ್ಯ.

ಶಬ್ದಾರ್ಥ : ಆವಾಹನೆ=ಸ್ವಾಗತಿಸುವಿಕೆ, ಬರಮಾಡುವಿಕೆ. ಚೂತಾಂಕುರ=ಚೂತ+ಅಂಕುರ= ಮಾವಿನ+ಮೊಳಕೆ-ಚಿಗುರು. ತಾಮರೆ-ತಾವರೆ=ಕಮಲ.

ವಿಶೇಷ : ಸಾಧನಕೇರಿಯ ನಮ್ಮ ಮನೆಯ (೧೩, ಶ್ರೀಮಾತಾ) ಅಂಗಳದಲ್ಲಿ ಮಲ್ಲಿಗೆಯ ಪೊದೆಗಳಿದ್ದವು. ಅದರ ಬದಿಬದಿಗೆ ಮಾವಿನ ಮರಿಗಳು. ವಸಂತಕಾಲದಲ್ಲಿ ಸಾಮಾನ್ಯವಾಗಿ ರಾತ್ರಿಯಲ್ಲಿಯೇ ಹೂವು ತೆಗೆದಿಡುವ ವಾಡಿಕೆ. ಒಂದು ದಿನ ಅವುಗಳನ್ನು ಹಾಗೆಯೇ ಬಿಟ್ಟು ಬೆಳುದಿಂಗಳಲ್ಲಿ ಅವುಗಳ ಬಿಳಿಬಣ್ಣದ ಸೌಭಾಗ್ಯ ಕಂಡುಂಡು ಸಸುಕು ಪ್ರಣಯಗೀತದಂತೆ ಬಂತು ಮಲ್ಲಿಗೆ ಎಂಬ ಈ ಕವನ. ಇದು ದವನ-ಕವನ ಭಾವಗೀತದಂತಿದೆ. ನಾಟ್ಯಗೀತವೂ ಆಗಬಹುದು.



# ೮ ಗಮಗಮಾ ಗಮಾಡಸತಾವ ಮಲ್ಲಿಗಿ

ಗಮಗಮಾ ಗಮಾಡಸತಾವ ಮಲ್ಲಿಗಿ। ನೀವು ಹೊರಟಿದ್ದೀಗ ಎಲ್ಲಿಗೆ?
ಗಮಗಮಾ........... ॥ ಪಲ್ಲವಿ ॥

೧

ತುಳುಕ್ಯಾಡತಾವ ತೂಕಡಿಕಿ
ಎವೆ ಅಪ್ಪತಾವ ಕಣ್ಣ ದುಡುಕಿ
ಕನಸು ತೇಲಿ ಬರತಾವ ಹುಡುಕಿ॥
ನೀವು ಹೊರಟಿದ್ದೀಗ ಎಲ್ಲಿಗೆ?

೨

ಚಿಕ್ಕಿ ತೋರಸ್ತಾವ ಚಾಚಿ ಬೆರಳ
ಚಂದ್ರಾಮ ಕನ್ನಡೀ ಹರಳ
ಮನಸೋತು ಆಯಿತು ಮರುಳ॥
ನೀವು ಹೊರಟಿದ್ದೀಗ ಎಲ್ಲಿಗೆ?

೩

ಗಾಳಿತಬ್ಬತಾವ ಹೂಗಂಪು
ಚಂದ್ರನ ತೆಕ್ಕಿಗಿದೆ ತಂಪು
ನಿಮ ಕಂಡರ ಕವದಾವ ಜೊಂಪು॥
ನೀವು ಹೊರಟಿದ್ದೀಗ ಎಲ್ಲಿಗೆ?

೪

ನೆರಳಲ್ಲಾಡತಾವ ಮರದ ಬುಡಕs
ಕೆರಿ ತೆರಿ ನೂಗತಾವ ದಡsಕ
ಹೀಂಗ ಬಿಟ್ಟು ಇಲ್ಲಿ ನನ್ನ ನಡsಕ
ನೀವು ಹೊರಟಿದ್ದೀಗ ಎಲ್ಲಿಗೆ?

೫

ನಮ್ಮ ನಿಮ್ಮ ಒಂದತನದಾಗ
ಹಾಡು ಹುಟ್ಟಿ ಒಂದು ಮನದಾಗ
ಬೆಳದಿಂಗಳಾತು ಬನದಾಗ॥
ನೀವು ಹೊರಟಿದ್ದೀಗ ಎಲ್ಲಿಗೆ?

೬

ನಾವು ಬಂದೆವಲ್ಲಿದಿಲ್ಲಿಗೆ
ಬಾಯಿ ಬಿಟ್ಟವಲ್ಲ ಮಲ್ಲಿಗೆ
ನೀರೊಡೆದಿತಲ್ಲ ಕಲ್ಲಿಗೆ
ನೀವು ಹೊರಟಿದ್ದೀಗ ಎಲ್ಲಿಗೆ ?॥

೭

ಬಂತ್ಯಾಕ ನಿಮಗ ಇಂದ ಮುನಿಸು
ಬೀಳಲಿಲ್ಲ ನಮಗ ಇದರ ಕನಸು
ರಾಯಾ ತಿಳಿಯಲಿಲ್ಲ ನಿಮ್ಮ ಮನಸು
ನೀವು ಹೊರಟಿದ್ದೀಗ ಎಲ್ಲಿಗೆ ?॥

- ಗಂಗಾವತರಣ : ೨೯/ಪ್ರ : ೧೯೫೧

---

ಭಾವ : ಒಂದು ಗೀತ ಕಥೆಯಲ್ಲಿ ಬರಬೇಕಾದ ಹಾಡು. ದವನದ ಹುಣ್ಣಿಮೆಯ ಜಾತ್ರಿಯ ರಾತ್ರಿಯು ಇದೇ ಮಾಲೆಗೆ ಸೇರಬೇಕು. ನಾಟ್ಯಗೀತ.



# ೯ ಹೂವೆ

೧
ಇದ್ದಲ್ಲಿ ಇರು ಹೂವೆ
ಗಾಳಿಹೊಳೆಯೊಳು ನಾವೆ
ತೂಗಾಡುತಿರುವಂತೆ ತೂಗುತ್ತಿರು.
೨
ಸವಿಯೆ ಚೆಲುವಿನ ಜೇನು
ಹೂ ಕೀಳಬೇಕೇನು ?
ನೋಟ ಕೂಟವು ಸಾಕು ಮಾಗುತ್ತಿರು.
೩
ಎಲರಲೆಯ ಪರಿಮಳಿಸಿ
ನಾತ - ಗೀತವನಳಿಸಿ
ಮೈಮನದಿ ನಂದನವನರಳಿಸುತಿರು.
೪
ಮೈಯ ಬಾನೊಳಗೆತ್ತು
ಅಲ್ಲಿ ಬೆಳಕನು ಬಿತ್ತು
ಮಣ್ಣನ್ನು ಕಂಪತ್ತ ಹೊರಳಿಸುತಿರು.

- ಗಂಗಾವತರಣ : ೩೯/ಪ್ರ : ೧೯೫೧

---

ಭಾವ : ಹೂವಿನ ಕಂಪು ಮಣ್ಣಿನ ಜೀವನ ಪರಿವರ್ತನೆ.



# ೧೦ ಬಿಳಿಕಣಿಗಿಲ

೧

ಬೆಳಕಿನ ಬಸಿರಲಿ ಅರಳುವ ಹೊಂಬಣ್ಣದ ತೆರದಿ
ಬಿಳಿಕಣಗಿಲ ಇಗೊ ಅರಳಿವೆ ಚಳಿಯಲಿ ಇಂಚರದಿ.
ಎಲರಲರಿದೆ ಬೆರಳಿನ ತುದಿ ಹೂ ಹಿಡಿ ಹಿಡಿವಂತೆ
ಕೋಕಿಲ ಕಂಠದ ಪಂಚಮ ವರ್ಣದಿ ಮಿಡಿವಂತೆ.

೨

ಶಿವಮಗ್ಗಿಯ ಬನದೊಳಗದೊ ಕೋಗಿಲ ಕೂ ಎಂದು
ಈಗಳೆ ಕೂಗಿದೆ, ಸುಗ್ಗಿಗೆ ಚಳಿ ಬೆನ್ ಬಿರಿವಂದು.
ಚಳಿ ಸೋಂಕಿಗೆ ಬಿಳಿಕಣಗಿಲ ಹೂತೊಲು ಕೊನೆಕೊನೆಗೆ
ಅಯ್ದೆಸಳಲಿ ಮನವಲರಲಿ ಕನ್ನಡ ಮನೆಮನೆಗೆ.

- ಜೀವಲಹರಿ : ೧೩/ಪ್ರ : ೧೯೫೭

---

ಭಾವ : ಶಿವವಮೊಗ್ಗೆಯ ಕಾಡಿನಲ್ಲಿ ಬಿಳಿ ಕಣಗಲ ಕಂಡಾಗ ಎದ್ದ ಭಾವ ಲಹರಿ.

ವಿಶೇಷ : ಈ ಹೂ ಮಾನಸಿಕ ಪರಿಪೂರ್ಣತೆಯ ಸಂಕೇತವೆಂದು ಪಾಂಡಿಚೇರಿಯ ಶ್ರೀಮಾತೆಯವರು ಗುರುತಿಸಿದ್ದಾರೆ.



## ೧೧ ಹೂ-ಊಂಹೂ

೧

ಕೂಹೂಽ ಕೂಹೂಽ ಕೂಹೂ
ಮೈತುಂಬ ಮಾವು ಹೂಽ ಹೂಽ
ಒಳಹೊರಗು ಹೂತೆವೇ ನಾವೂಽ
ನೀವೂಽ
ಕೂಹೂಽ

೨

ತುಟಿ ತುಟಿಗೆ ಮುತ್ತನೊತ್ತಿಽಽ
ಜೇನ್ನುಡಿಯ ಬೀಜ ಬಿತ್ತಿಽಽ
ಮಧುಚಂದ್ರನ ಸ್ವಪ್ನವನೆತ್ತಿಽ
ಸುಳಿದಾಡುತಿತ್ತು ಸುತ್ತೂಽ
ತುತ್ತೂ ತುತ್ತೂ ತುತ್ತೂ
ಬರಿ ಮುತ್ತೇ ಮುತ್ತೇ ಮತ್ತೂ.

೩

ಬಾವೂ ಬಾವೂ ಬಾವೂ
ಮೈತುಂಬ ಉರಿವ ಕಾವೂ
ವಾಾವಾಯಿತು ಯಾವುದೊ ಬೇವು.
ಅದೆ ಇದ್ದರು ನಾವೂ ನೀವೂ
ಬಾಳಾಗಿದೆ ಬದುಕಿನ ಸಾವು
ಥೂ ಥೂ ಥೂ ಥೂ
ಹುಳುಹುಳುಕು ತೂತು ಮಾತೂ
ಓಹೋಽ ಹೊ ಏನೋ ನೋವು
ಕೂಹೂಽ-
ಬುಸುಗುಡುತಿವೆ ಸುತ್ತೂ ಮುತ್ತೂ। ಹಾವೂ
ಅಣಗಿಸುತಿವೆ ಒಣಗಿದ ಹೂವೂ
ಎಲ್ಲಿರುವುದು ಆಗಿನ ಹೂಹೂ
ಊಂಹೂಽ ಊಂಹೂಽ ಊಂಹೂಽ.

- ಸಂಚಯ : ೯/ಪ್ರ : ೧೯೫೯

---

ಭಾವ : ಬದುಕು ಬಾಳಾಗುವುದು-ಹೂವಿನ ಅರಳುವಿಕೆಯಂಥ ಅದ್ಭುತ ಕ್ರಿಯೆ, ಅದರ ವರ್ಣನೆ ಈ ಪದ್ಯ.

## ೧೨ ಹಸಿರಲ್ಲಿವೆ ಕೆಸರಲ್ಲಿವೆ

೧
ಹಸಿರಲ್ಲಿವೆ ಕೆಸರಲ್ಲಿವೆ ಹೆಸರಿಲ್ಲದ ಹೂವು
ಉಸಿರಾಡಿಸಿ ಹುಸಿಮುಸಿ ನಗೆ ಸೂಸುತ್ತಿವೆ ತಾವು
೨
ಹಾ ಹಾ ಈ ಹೂ ಹೂ ಇವೆ ಸರಸಿಯ ಸರಿಸದಲಿ
ತೋರದೆ ಕುಣಿವಪ್ಸರೆಯರ ಕಾಣದ ಪರಿಸೆಯಲಿ
೩
ಗಾಳಿಯ ಅಲೆ ತಲೆದೂಗಿದೆ ಮಿತವಾಗಿದೆ ಸರ್ವ
ಹಾಡುವವೊಲು ಕೇಳಿಸುತಿದೆ ಯಾವನೊ ಗಂಧರ್ವ
೪
ಪ್ರೇಕ್ಷಕರೆನೆ ಕುಳಿತಿರುವರೊ ಯಕ್ಷನ ಬಳಿ ಯಕ್ಷಿ
ಕಲ್ಪತರಂಗವ ತಲ್ಪಿಸೆ ಅರಳಿದೆ ಚೈತ್ಯಾಕ್ಷಿ
೫
ಚರಿಸುತ್ತಿದೆ ಗೋಚರಿಸದ ಪರದೇಹಿಕ ಭಾವ
ಸ್ಥೂಲಕ್ಕೆಳೆಯಲೆ ಸೂಕ್ಷ್ಮದ ನಸುಕಿನ ಝುಂಜಾವ?
೬
ಎಚ್ಚರ ಎಚ್ಚರ ಎಚ್ಚರ ಉಚ್ಚರಿಸಿತು ಸ್ವರವು
ಕಿವಿಗಂಟೆಯ ಹುದುಲಯದಲಿ ಮೌನದ ಮರ್ಮರವು
೭
ನರುಗಂಪಿನ ಕಂಪನದಲಿ ರಾಗದ ಚಾತುರ್ಯ
ಚಾರುತ್ವದ ಧುರವಹಿಸಿರೆ ಮದಿಸಿದ ಮಾಧುರ್ಯ

೮
ತೂರ್ಯದ ರವ ತುತುತ್ತೂ ತುತೂತ್ರಿಯನೂದಿ
ಸ್ವಚ್ಛಂದಕೆ ಹೃತ್‌ಸ್ಪಂದಕೆ ತೆರೆಯಿತು ಹೋ! ಹಾದಿ
೯
ಚಿತ್ರದ ವರ್ಣವು ಹಾರಿರೆ ಉಳಿದಿರುವೊಲು ರೇಖೆ
ಏನೋ ಸೂಚಿಸುವಂತಿದೆ ಅದ ಬಣ್ಣಿಸಲೇಕೆ?
೧೦
ಕ್ಷಣ ಭಂಗುರ ಸೌಂದರ್ಯವ ರಕ್ಷಣದಲೆ ಉಳಿಸಿ
ಶಿಕ್ಷಣರಂಗವ ಹೂಡುವ ಈ ಕ್ಷಣದಲೆ ವೊಳಿಸಿ
೧೧
ಓ ರಸಿಕನೆ ರಚಿಸುವ ಬಾ ನಾ ನೀನೊಡಗೂಡಿ
ಸಂಭಾವಿತ ಕವನವದೇ ಬರಲದು ಒಳಮೂಡಿ.

- ನವುನ : ೬/ಪ್ರ : ೧೯೫೮

---

ಭಾವ : ಹೂವಿಗೆ ಗುಣಗಳಿದ್ದರೆ ಸಾಕು, ಹೆಸರಿಲ್ಲದಿದ್ದರೂ ನಡೆಯುತ್ತದೆ ಎಂಬ ಭಾವ. ಅನಾಮಧೇಯ ಪುಷ್ಪದ ಕೀರ್ತಿ ಕಥನ ಇಲ್ಲಿದೆ.

ವಿಶೇಷ : ಈ ಕವನ ಜೀವನ ಪತ್ರಿಕೆ ಸಂ.೧೯ ಸಂ.೪ (ಆಗಸ್ಟ್ ೧೯೫೮) ರಲ್ಲಿ ಪ್ರಕಟಗೊಂಡಾಗ ಸಂಭಾವಿತ ಕವನ ಎಂಬ ಶೀರ್ಷಿಕೆ ಇತ್ತು.



## ೧೩ ಹುಂಜ-ಹೂ

೧

ಎದೆಗೆಂಪು, ಎದೆಗಂಪು, ಎದೆ ಕಂಪನಂಗಳಲಿ
ತೆರೆಯನರಿಯದ ಹೃದಯ ತೆರೆಯುತಿಹುದು
ಎಲರಿನಲೆ ಅಲರುತಲೆ ಕೊಡಹಿ ಕೊಡಕೊಡ ತುಂಬಿ
ನೀರಿನೊಲು ನೀರಾಗಿ ಬೆರೆಯುತಿಹುದು.

೨

ಯಾವ ಬೇಗೆಯು ಇಲ್ಲಿ ಕಾಗೆಗಳ ಚದುರಿಸುತ
ಎಂಥ ನಿಗಿನಿಗಿ ಕೆಂಡ ಪುಂಜವಾಗಿ
ಕಾದಾರದೇ ನೀಲಿ ಮುಗಿಲನಡರಡರಿಕೆಂ-
ಜೆಡೆ ಪಸರಿಸುತ್ತಿಹುದೊ ಹುಂಜವಾಗಿ.

೩

ಓಹೊ! ಹುಂಜದ ಪುಂಜ ಪೂಜೆ ಬಾನ್ ಹೂಜೆಯಲಿ
ನೀಡುವದು ಕೆನ್ನೀರ ಹೂವ ಮಾಡಿ
ಹಸುರೆಲೆಯ ಬಿಸಿಯುಸಿರು ಜೀವ ತಣಿಸುತ್ತಿಹುದು
ಬಯಲ ಭಾವದ ಬಸಿಗೆ ಭಾವ ಮೂಡಿ.

- ಇದು ನಭೋವಾಣಿ : ೧೬/ಪ್ರ ೧೯೭೦

---

ಭಾವ : ಬೆಳಗಿನ ಸಮಯದ ಕೆಂಪು ಆಕಾಶ-ಹುಂಜಗಳ ಗುಂಪಿನಂತೆ ಆಕರ್ಷಕವಾಗಿದೆ ಎಂಬ ರೂಪಕ ಮನೋಜ್ಞವಾಗಿದೆ.



# ೧೪ ಜೇಡನ ಹೂ

೧
ಎಳೆ ಸೆಳೆ ಹೂವಿನ ತಿಳಿ ಬಿಳಿ ಬಣ್ಣ
ಇದು ಯಾ ಲೋಕದ ನವ ಪುಷ್ಪ ?
ಆಕೂತಿಗೆ ಕೇಸರಿಸಿದ ಕಣ್ಣ
ಆನಂದದ ಸುಂದರ ಬಾಷ್ಪ
೨
ತವಕದ ಮರ್ಮದ ಶರ್ಮದ ದಳವೇ
ದಳದಳ ವಿಕಸಿತ ಅವಿರತವು
ಯುವಕನ ಮುಖದಲಿ ಶಿಶುವಿನ ಕಳೆ ಬರೆ
ವಿಸ್ಮಿತ ಕುತುಕಕೆ ಸ್ವಾಗತವು.
೩
ಕೃಪಾ ಪ್ರಸಾದದ ತುಂತುರು ಕಣಕಣ
ತೂರಿ ಹಿಡಿಯುವೊಲು ಊರ್ಣಿಸಿದೆ
ತಂತುವಾಯದಾ ಉಪಾಯ ಕ್ಷಣಗಣ
ಪೋಣಿಸಿದೊಲು ಅವತೀರ್ಣಿಸಿದೆ.

- ಇದು ನಭೋವಾಣಿ : ೧೯/ಪ್ರ : ೧೯೭೦

ಭಾವ : ಜೇಡನ ಬಲೆಯ ನೇಯುವಿಕೆ ಹೂವಿನ ಪಕಳೆಗಳ ವಿನ್ಯಾಸದಂತೆ ಕವಿಗೆ ಕಂಡಿದೆ.



# ೧೫ ಮುಗಿಲ-ಮಲ್ಲಿಗೆ

ಓ ಮುಗಿಲ ಮಲ್ಲಿಗೇ
ಎದ್ದೆ ಎತ್ತ? ಎಲ್ಲಿಗೇ ? ॥ ಪಲ್ಲವಿ ॥

೧
ಬಾನಕಡೆಗೆ ನಿನ್ನ ಓಟ
ನೆಲದ ಎಡೆಗೆ ನಿನ್ನ ನೋಟ
ಉದ್ಧಾರದ-ಅವತಾರದ
ಯಾವ ಆಟ ನಡೆದಿದೆ ?
ಯಾವ ಯೋಗ ಪಡೆದಿದೆ ?

೨
ಭೂಮಿಯಲ್ಲಿ ನಿನ್ನ ಬೇರು
ಬಯಲಿನಲ್ಲಿ ನಿನ್ನ ಏರು
ಏನು ಲಕ್ಷ್ಯ? ಇಲ್ಲಲಕ್ಷ!
ಯಾವ ಲೀಲೆ ತೋರುವೆ ?
ಯಾವ ಲೋಕಕೇರುವೆ ?

೩
ಓಹೊ ಹೂವು ಜಲ್ಲಿ ಜಲ್ಲಿ
ಬಾಗಿದೆ ಅಗೊ ಗೊಲ್ಲಿ ಗೊಲ್ಲಿ
ನೇಹ ನೂತು-ಮಮತೆ ಸೋತು
ಯಾ ಪ್ರಸಾದ ತರುತಿಹೆ ?
ಯಾ ಅರ್ಪಣದಿರುತಿಹೆ ?



೪
ಓಽ ಬಾನಮಲ್ಲಿಗೆ
ಎಲ್ಲೆ ಇಲ್ಲದಲ್ಲಿಗೆ
ಏರಿಏರಿ-ಭುವಿಗೆ ಸಾರಿ
ಮೌನದೊಂದು ಸೊಲ್ಲಿಗೆ
ಎಡೆ ಮಾಡುವೆ ಇಲ್ಲಿಗೆ.

- ಮುಗಿಲ ಮಲ್ಲಿಗೆ : ೧/ಪ್ರ : ೧೯೬೧

---

ಭಾವ : ನನ್ನ ಮನೆಯಂಗಳದಲ್ಲಿ ಮುಗಿಲಮಲ್ಲಿಗೆಯ ಮರವೊಂದಿದೆ. ಈ ವಿಷಯ ಸಖೀಗೀತ ದಲ್ಲಿಯೂ ಬಂದಿದೆ. ಅದರ ಸಾಂಕೇತಿಕ ಅರ್ಥವನ್ನು ಭಾವಿಸಿ ಬರೆದುದು. ಪರಿಣಮನ ಪುಷ್ಪ (Transformation Flower) ಎಂದೂ ಇದರ ಸಂಕೇತ.

ವಿಶೇಷ : ೧) ಶ್ರೀ ಅರವಿಂದರು ಶ್ರೀಮಾತೆಯವರ ತಲೆಯ ಮೇಲೆ ಕೈಯಿಟ್ಟು ಸುಪ್ರಮಾನಸ ಶಕ್ತಿಯ ಅವತರಣವಾಗುವ ಪ್ರಾರ್ಥನೆ ಮಾಡಿದಾಗ ಆಶ್ರಮದ ಸುತ್ತಲೂ ಇದ್ದ ಮುಗಿಲ ಮಲ್ಲಿಗೆಯ ಎಲ್ಲ ಪುಷ್ಪಗಳು ಭೂಮಿಗೆ ಬಿದ್ದ ಘಟನೆ ಆಯಿತು ಎಂಬುದು ನೋಂದು ಆಗಿದೆ. ಶ್ರೀಮಾತೆಯವರಲ್ಲಿ ಪರಿವರ್ತನ ಹಾಗೂ ಅವತರಣ ಕ್ರಿಯೆ ನಡೆದುದರ ಸಂಕೇತ ಇದು ಎಂದು ಭಾವಿಸಲಾಗುತ್ತದೆ.

೨) ನಮ್ಮ ಮನೆಯ ಅಂಗಳದ ಮುಗಿಲ ಮಲ್ಲಿಗೆ ನಮ್ಮ ಮನೆಯ ಮೇಲೆ ಬಿದ್ದಾಗ ಅದನ್ನು ಎದೆ ಎತ್ತರ ಮಾತ್ರ ಇಟ್ಟು ಕಡಿಯಬೇಕಾಯಿತು. ಕಡೆದ ಭಾಗದ ಮೇಲೆ ಕೆಂಪು ಬಣ್ಣದಿಂದ 'ಶಿವ ಚಿದಂಬರ' ಎಂದು ಬರೆಯಲು ಬೇಂದ್ರೆಯವರು ಸಾಯಂಕಾಲ ಹೇಳಿದರು. ಸ್ವಲ್ಪ ಸಮಯದಲ್ಲಿ ಗದಗಿನ ಡಾ|| ಉಮಚಗಿಯವರ ಆಳು, ಮಾನಸಿಕ ರೋಗದಿಂದ ಬಳಲುವನು ನಮ್ಮ ಮನೆಗೆ ಬಂದನು. ಅವನನ್ನು ಧಾರವಾಡದ ಮಾನಸಿಕ ಉಪಚಾರ ಕೇಂದ್ರಕ್ಕೆ ಸೇರಿಸಿದೆವು. ಸ್ವಲ್ಪ ದಿನದಲ್ಲಿ ಅವನು ಸುಖವಾಗಿ ಮರಣ ಹೊಂದಿದನು. ಈ ಕ್ರಿಯೆಗೂ ಮುಗಿಲ ಮಲ್ಲಿಗೆಯ ಗಿಡ ನಮ್ಮ ಮನೆಯ ಮೇಲೆ ಬೇಳುವುದಕ್ಕೂ ಸಂಬಂಧ ಸಂಕೇತ ಬೇಂದ್ರೆ ಪೂರ್ವಭಾವಿಯಾಗಿ ಕಂಡಂತಿತ್ತು ಈ ಘಟನೆ.

